KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೧, (ಶ್ರಾವಣ ೨೭, ಶಕ ವರ್ಷ ೧೯೩೩) | ಸಂಚಿಕೆ ೩೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹೊನ್ನಾಳ್ಳಿ ಪಟ್ಟಣ ಪಂಚಾಯತ್ ವ್ಯಾಪ್ತಿಯ ವಿವಿಧ ವಾರ್ಡ್‌ಗಳಲ್ಲಿ ವಿತರಣಾ ಕೊಳವೆ ಮಾರ್ಗಗಳ ಕಾಮಗಾರಿಯನ್ನು ರೂ.72.00 ಲಕ್ಷಗಳ ಅಂದಾಜಿನಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ:ಕಜಮಂ: ಆಶೇಕಾಅ–1/ತಾಸ–8/ಸಅ–11/ನೀಸಯೋ–ಹೊನ್ನಾಳ್ಳಿ/ 3262/2009–19 ದಿನಾಂಕ:19–2–2010.

**ಪ್ರಸ್ತಾವನೆ:**

ಹೊನ್ನಾಳ್ಳಿ ಪಟ್ಟಣವು ದಾವಣಗೆರೆ ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯ ಪ್ರಕಾರ 15,568 ಹಾಗೂ ಪ್ರಸ್ತುತ 16,450 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2026ರಲ್ಲಿ 30,000 ಮತ್ತು 2041ರಲ್ಲಿ 45,000 ಆಗಬಹುದೆಂದು ಅಂದಾಜಿಸಲಾಗಿದೆ.

ಹೊನ್ನಾಳ್ಳಿ ಪಟ್ಟಣಕ್ಕೆ ಸರ್ಕಾರದ ಆದೇಶ ಸಂಖ್ಯೆ: ನಅಇ 86 ಯುಡಬ್ಲ್ಯೂಎಸ್ 2005 ದಿನಾಂಕ:22–11–2005ರಲ್ಲಿ ರೂ.350.00 ಲಕ್ಷಗಳಿಗೆ ತುಂಗಭದ್ರಾ ನದಿ ಮೂಲದಿಂದ ನೀರು ಸರಬರಾಜು ಯೋಜನೆಯನ್ನು ಕಲ್ಪಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು. ಸದರಿ ಯೋಜನೆಯನ್ನು ಜೂನ್ 2009ರಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯಿಂದ ಪ್ರತಿದಿನ 4.67 ದಶಲಕ್ಷ ಲೀಟರ್ ನೀರಿನ ಲಭ್ಯತೆ ಇದ್ದು, ನೀರು ಸರಬರಾಜು ನಿರ್ವಹಣೆಯನ್ನು ಪಟ್ಟಣ ಪಂಚಾಯಿತಿ ನಿರ್ವಹಿಸುತ್ತಿದ್ದು, ಪ್ರತಿ ದಿನ ವಿತರಣೆ ಮಾಡಲಾಗುತ್ತಿದೆ. ಪಟ್ಟಣದ ಹೊರಭಾಗದಲ್ಲಿ ಕೆಲವು ಬಡಾವಣೆಗಳು ಅಭಿವೃದ್ಧಿಯಾಗಿದ್ದು, ಹಾಗೂ ಹಳೆಯ ಪಟ್ಟಣದ ಕೆಲವು ಭಾಗಗಳು ಬಿಟ್ಟುಹೋದ ಪ್ರದೇಶಗಳಲ್ಲಿ ನೀರು ವಿತರಣಾ ವ್ಯವಸ್ಥೆಯನ್ನು ಅಳವಡಿಸಬೇಕೆಂದು ಪಟ್ಟಣ ಪಂಚಾಯಿತಿಯು ಕೋರಿದ ಹಿನ್ನೆಲೆಯಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ.72.00 ಲಕ್ಷಗಳ ಅಂದಾಜಿನಲ್ಲಿ ವಿತರಣಾ ಕೊಳವೆ ಮಾರ್ಗವನ್ನು ಅಳವಡಿಸುವ ಯೋಜನೆಯನ್ನು ತಯಾರಿಸಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ.

ಈ ಯೋಜನೆಯನ್ನು ಮಂಡಳಿಯ 2010–11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯ ಪ್ರವರ್ಗ–ಡಿ ಯಡಿಯಲ್ಲಿ ಸೇರಿಸಿ, ಪ್ರಸ್ತುತ ಸಾಲಿನಲ್ಲಿ ರೂ.24.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 06 ಯುಡಬ್ಲ್ಯೂಎಸ್ 2011 ಬೆಂಗಳೂರು, ದಿನಾಂಕ:03.05.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳ್ಳಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯ ವಿವಿಧ ವಾರ್ಡ್‌ಗಳಲ್ಲಿ ವಿತರಣಾ ಕೊಳವೆ ಮಾರ್ಗಗಳನ್ನು ಅಂದಾಜು ರೂ.72.00 ಲಕ್ಷಗಳಲ್ಲಿ (ರೂ. ಎಪ್ಪತ್ತೆರಡು ಲಕ್ಷಗಳು ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **ಕೊಳವೆ ನೀರು ಸರಬರಾಜು ಯೋಜನೆಯಡಿ**_ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) *The Escalation charges should not form part of the estimate. It should be borne by the concerned ULB. The estimate should be reduced to such extent.*

2) ETP & contingencies to be restricted to 5%.
3) The consent of the ULB shall be obtained for the extra cost that might occur due to deviations, extra item works or variations in the Scheme.
4) Adequate provision to be made by the Board in the following Years for timely completion of the Project.
5) Escalations and Tender premium over and above the approved estimate cost should be approved with the prior consent of the ULB.
6) Water rates as proposed by KUWS&DB have to be implemented to meet O & M cost of UGD.
7) KTPP provisions, quality control and timely completion should ensured.
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1256

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸೇರ್ಪಡೆ ಆದೇಶ

ಸಂಖ್ಯೆ: ಆಕುಕ54 ಎಂಎಂಸಿ 2011, ಬೆಂಗಳೂರು, ದಿನಾಂಕ: 27.04.2011

ಸರ್ಕಾರದ ಆದೇಶ ಸಂಖ್ಯೆ: ಆಕುಕ 182 ಎಂಎಂಸಿ 2009, ದಿನಾಂಕ: 27.07.2010ರ ಆದೇಶದ ಭಾಗದಲ್ಲಿ "ಸರ್ಕಾರಿ ಸ್ವಾಯತ್ತ ಸಂಸ್ಥೆಯಾದ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿ ನಿಯೋಜನೆಯ ಮೇಲೆ ಬೋಧಕರಾಗಿ ಕಾರ್ಯನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಈ ಕೆಳಗಿನ 14 ದಂತ ವೈದ್ಯಾಧಿಕಾರಿಗಳ ಸೇವೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಸ್ವಾಯತ್ತ ಸಂಸ್ಥೆಯಾದ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಸೇವೆಯಲ್ಲಿ ಈ ಕೆಳಗಿನ ಷರತ್ತುಗಳಿಗೊಳಪಟ್ಟು ಶಾಶ್ವತವಾಗಿ ವಿಲೀನಗೊಳಿಸಿದೆ" ಎಂಬುದನ್ನು "ಸರ್ಕಾರಿ ಸ್ವಾಯತ್ತ ಸಂಸ್ಥೆಯಾದ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿ ನಿಯೋಜನೆಯ ಮೇಲೆ ಬೋಧಕರಾಗಿ ಕಾರ್ಯನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಈ ಕೆಳಗಿನ 14 ದಂತ ವೈದ್ಯಾಧಿಕಾರಿಗಳ ಸೇವೆಯನ್ನು **'ಸಾರ್ವಜನಿಕ ಹಿತಾಸಕ್ತಿಗೆ ಒಳಪಟ್ಟು'** ಈ ಕೂಡಲೇ ಜಾರಿಗೆ ಬರುವಂತೆ ಸ್ವಾಯತ್ತ ಸಂಸ್ಥೆಯಾದ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಸೇವೆಯಲ್ಲಿ ಈ ಕೆಳಗಿನ ಷರತ್ತುಗಳಿಗೊಳಪಟ್ಟು ಶಾಶ್ವತವಾಗಿ ವಿಲೀನಗೊಳಿಸಿದೆ" ಎಂದು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಕೆ. ಭೈರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

ಪಿ.ಆರ್. 1257

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಬಿ. ಸುಧಾ, ತಹಶೀಲ್ದಾರ್, ಗೌರಿಬಿದನೂರು ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ: 1.** ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 110 ಎಎಸ್‌ಡಿ 2006, ದಿ. 22.06.2006

**2.** ಶ್ರೀಮತಿ ಬಿ. ಸುಧಾ, ತಹಶೀಲ್ದಾರ್, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಮನವಿ ದಿನಾಂಕ: 14.01.2011.

**ಪ್ರಸ್ತಾವನೆ:**

ಶ್ರೀಮತಿ ಬಿ. ಸುಧಾ, ಪರಿವೀಕ್ಷಣಾ ತಹಶೀಲ್ದಾರ್, 2005ನೇ ತಂಡ ಪ್ರಸ್ತುತ ತಹಶೀಲ್ದಾರ್, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ, ಇವರಿಗೆ ಮೇಲೆ ಓದಲಾದ ಕ್ರಮಸಂಖ್ಯೆ: (1)ರ ದಿನಾಂಕ: 21.01.2006ರ ಆದೇಶದಲ್ಲಿ ಪರಿವೀಕ್ಷಣಾ ತಹಶೀಲ್ದಾರ್ ಗುಂಪು ಬಿ ಹುದ್ದೆಗೆ ನೇಮಕಾತಿ ನೀಡಿ ಆದೇಶಿಸಲಾಗಿತ್ತು. ಸದರಿಯವರು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗಲು ಕಾರಣಾಂತರಗಳಿಂದ ಸಾಧ್ಯವಾಗಿರುವುದಿಲ್ಲವೆಂದು ಉಲ್ಲೇಖಿತ (2)ರ ದಿ: 14.01.2011ರ ತಮ್ಮ ಮನವಿಯಲ್ಲಿ ತಿಳಿಸುತ್ತಾ ಪಾಸು ಮಾಡದಿರುವ ಬಗ್ಗೆ ಪ್ರಸ್ತುತ ಸಾಲಿನಲ್ಲಿ ಬಾಕಿಯಿರುವ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡುವುದಾಗಿ ಲಿಖಿತ ರೂಪದಲ್ಲಿ ತಿಳಿಸಿ ದಿ: 31.12.2010ರವರೆಗೆ ಪರಿವೀಕ್ಷಣಾ ವರದಿಯನ್ನು ವಿಸ್ತರಿಸುವಂತೆ ಕೋರಿಕೊಂಡಿರುತ್ತಾರೆ. ಸದರಿಯವರ ಮನವಿಯನ್ನು ಪರಿಶೀಲಿಸಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಪ್ರೊಬೇಷನ್) 1977ರ ನಿಯಮ 4(1) (ii)ರ ಪ್ರಕಾರ ದಿ: 31.12.2010ರವರೆಗೆ ಪರಿವೀಕ್ಷಣಾ ಕಾಲಾವಧಿಯನ್ನು ವಿಸ್ತರಿಸಲು ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 292 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 05.05.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಾಂತರಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀಮತಿ ಬಿ. ಸುಧಾ, ಪರಿವೀಕ್ಷಣಾ ತಹಶೀಲ್ದಾರ್, 2005ನೇ ತಂಡ, ಪ್ರಸ್ತುತ ತಹಶೀಲ್ದಾರ್, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ ಕರ್ನಾಟಕ ಸೇವಾ ನಿಯಮಾವಳಿ (ಪ್ರೊಬೇಷನರಿ) 1977 ನಿಯಮ 4 (1) (ii)ರ ಪ್ರಕಾರ ದಿ: 31.12.2010ರವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ. ಸದರಿ ಅವಧಿಯನ್ನು ಪುನಃ ಯಾವುದೇ ಕಾರಣಕ್ಕೂ ವಿಸ್ತರಿಸುವುದಿಲ್ಲ ಮತ್ತು ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದದಿದ್ದಲ್ಲಿ (Probation Rules) ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1258

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/1964/2011 ದಿನಾಂಕ: 15-04-2011.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಧನ್ಯಾಳ ಗ್ರಾಮದಲ್ಲಿ 358, ಬಸವನ ಬಾಗೇವಾಡಿ ತಾಲ್ಲೂಕಿನ, ಹುಣಶ್ಯಾಳ.ಪಿ.ಸಿ. ಗ್ರಾಮದಲ್ಲಿ 350, ಸಿಂಧಗಿ ತಾಲ್ಲೂಕಿನ ನಂದಗೇರಿ ಗ್ರಾಮದಲ್ಲಿ 147 ಮತ್ತು ಬಸವನಬಾಗೇವಾಡಿ ತಾಲ್ಲೂಕಿನ ಡೋಣುರು ಗ್ರಾಮದಲ್ಲಿ 623 ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ವಹಿಸಲಾಗಿದ್ದು, ಇದರ ಅಂದಾಜು ವೆಚ್ಚ ರೂ. 21.052 ಕೋಟಿಗಳಾಗಲಿದ್ದು, ಈಗಾಗಲೇ ರೂ.5.00 ಕೋಟಿ ಬಿಡುಗಡೆ ಮಾಡಿದ್ದು, ಈ ಪೈಕಿ ರೂ. 8.922 ಕೋಟಿ ಹಣವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರಿಗೆ ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 174 ಟಿಎನ್‌ಆರ್ 2010 ಬೆಂಗಳೂರು, ದಿನಾಂಕ: 02-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಧನ್ಯಾಳ ಗ್ರಾಮದಲ್ಲಿ 358, ಬಸವನ ಬಾಗೇವಾಡಿ ತಾಲ್ಲೂಕಿನ, ಹುಣಶ್ಯಾಳ.ಪಿ.ಸಿ. ಗ್ರಾಮದಲ್ಲಿ 350, ಸಿಂಧಗಿ ತಾಲ್ಲೂಕಿನ ನಂದಗೇರಿ ಗ್ರಾಮದಲ್ಲಿ 147 ಮತ್ತು ಬಸವನಬಾಗೇವಾಡಿ ತಾಲ್ಲೂಕಿನ ಡೋಣುರು ಗ್ರಾಮದಲ್ಲಿ 623 ಆಸರೆ ಯೋಜನೆಯಡಿ ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ರೂ.8,92,20,000/- ಕೋಟಿ (ರೂ. ಎಂಟು ಕೋಟಿ ತೊಂಬತ್ತೆರಡು ಲಕ್ಷದ ಇಪತ್ತು ಸಾವಿರ ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆ 8235-00-111-0-02 "Public Contributions to Calamity Relief" ಅಡಿಯಲ್ಲಿ ಡ್ರಾ ಮಾಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರು ಪೇಯೀಸ್ ರಸೀದಿ ಬಿಲ್ಲು (ಸಿಟಿಎಸ್-8) ತಯಾರಿಸಿ ಮೇಲು ರುಜು ಮಾಡಿ ಬಿಜಾಪುರ ಜಿಲ್ಲಾ ಖಜಾನೆಗಳಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ. ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಅನುದಾನ ವೆಚ್ಚ ಮಾಡಿದ್ದಕ್ಕೆ, ಸಂಬಂಧಪಟ್ಟ ಅಧಿಕಾರಿಗಳು ಹಣಬಳಕೆ ಪ್ರಮಾಣ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು. ಹಾಗೂ ಕಾಮಗಾರಿಗಳ ಬಗ್ಗೆ ಭೌತಿಕ ಹಾಗೂ ಆರ್ಥಿಕ ಪ್ರಗತಿಯನ್ನು ಸಹ ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ: ಮುಮಕಾ/1964/2011, ದಿನಾಂಕ: 15-04-2011ರನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1259

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿ.ನಿ & ಸೇವೆಗಳು-2

## ಶಿಕ್ಷಣ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಯಿಂದ ಅಂಗವಿಕಲ ಮಕ್ಕಳ ಸಮನ್ವಯ ಶಿಕ್ಷಣ ಯೋಜನೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ 2007-08ನೇ ಸಾಲಿನ 2ನೇ ಕಂತಿನ ಬಾಕಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ: 1.** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 14-21/2007 ಐ.ಇ ದಿನಾಂಕ: 13.03.2008.

**2.** ಸರ್ಕಾರದ ಆದೇಶ ಸಂಖ್ಯೆ:ಇಡಿ: 196 ಯೋಸಕ 2007 ದಿನಾಂಕ: 21.05.2008.

**3.** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಎಫ್.ನಂ 14-21/2007 ಐ.ಇ.ಡಿ.ಸಿ. ದಿನಾಂಕ: 14.12.2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಂತೆ ಕೇಂದ್ರ ಸರ್ಕಾರವು ಕೇಂದ್ರ ಪುರಸ್ಕೃತ ಯೋಜನೆಯಡಿ ಬರುವ ಅಂಗವಿಕಲ ಮಕ್ಕಳ ಸಮನ್ವಯ ಶಿಕ್ಷಣ ಯೋಜನೆಗೆ ಸಂಬಂಧಿಸಿದಂತೆ 2007-08ನೇ ಸಾಲಿನ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಿದ್ದು ಅದರಂತೆ ಮೇಲೆ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಅನುದಾನವನ್ನು ಜಿಲ್ಲಾವಾರು ಬಿಡುಗಡೆ ಮಾಡಿ ಆದೇಶ ನೀಡಿದೆ.

ಮೇಲೆ (3)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ ಸಮನ್ವಯ ಶಿಕ್ಷಣ ಯೋಜನೆಗೆ ಕುರಿತಂತೆ 2007-08ನೇ ಸಾಲಿಗೆ 2ನೇ ಕಂತಿಗೆ 4 ಸ್ವಯಂ ಸೇವಾ ಸಂಸ್ಥೆಗಳಿಗೆ ರೂ.6,78,420/-ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಬಿಡುಗಡೆ ಮಾಡಿರುವ ಈ ಮೊತ್ತವನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವಂತೆ ಸೂಚಿಸಿರುತ್ತಾರೆ. ಅದರಂತೆ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದಂತೆ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಲು ಸರ್ಕಾರವು ಕೆಳಕಂಡಂತೆ ಆದೇಶಿಸಲಾಗಿದೆ.

ಕೇಂದ್ರ ಸರ್ಕಾರದ ಪತ್ರವನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 138 ಎಂಸಿಡಿ 2009, ಭಾಗ-1, ಬೆಂಗಳೂರು, ದಿನಾಂಕ:- 03-05-2011.**

ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಯಡಿಯಲ್ಲಿ ಅಂಗವಿಕಲ ಮಕ್ಕಳಿಗೆ ಸಮನ್ವಯ ಶಿಕ್ಷಣ ನೀಡುವ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು 2007-08ನೇ ಸಾಲಿನ 2ನೇ ಕಂತಿಗೆ ಬಿಡುಗಡೆ ಮಾಡಿರುವ ಅನುದಾನವನ್ನು ಈ ಆದೇಶದ ಅನುಬಂಧ-1ರಲ್ಲಿ ಹೆಸರಿಸಿರುವ ಮೂರು ಸ್ವಯಂ ಸೇವಾ ಸಂಸ್ಥೆಗಳಿಗೆ ಅನುದಾನ ರೂ.6,15,385/-(ಆರು ಲಕ್ಷ ಹದಿನೈದು ಸಾವಿರದ ಮೂರುನೂರ ಎಂಬತ್ತೈದು ರೂಗಳು ಮಾತ್ರ) ಗಳನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಬಿಡುಗಡೆ ಮಾಡಿದ ಈ ಮೊತ್ತದಲ್ಲಿ ಯಾವುದಾದರೂ ಸಂಸ್ಥೆಯು ಕಪ್ಪುಪಟ್ಟಿಯಲ್ಲಿ ಸೇರಿದ್ದಲ್ಲಿ ಅಂತಹ ಸಂಸ್ಥೆಗಳಿಗೆ ಅನುದಾನವನ್ನು ಬಿಡುಗಡೆ ಮಾಡಬಾರದು.

ವೆಚ್ಚ ಭರಿಸುವ ಮುನ್ನ 2007-08ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡಿರುವ ಆಧಾರದ ಮೇಲೆ Link document ಹಣದಿಂದ ತಮ್ಮ ಕಾರ್ಯ ಕ್ಷೇತ್ರದಲ್ಲಿ ಬರುವ ಆಯಾ ಸ್ವಯಂ ಸೇವಾ ಸಂಸ್ಥೆಗಳಿಗೆ ಅನುಬಂಧ-1ರಲ್ಲಿ ನಿಗದಿಪಡಿಸಿರುವ ಅನುದಾನವನ್ನು ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಅನುಮತಿ ನೀಡಿದೆ.

ಸದರಿ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳಿಗೆ ನೀಡಿದೆ.

ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ಶಾಲಾಗಳು, ಬೆಂಗಳೂರು ಇವರ ಪತ್ರ ಸಂಖ್ಯೆ ಎಸಿ1ಐ.ಇ.ಡಿ.ಸಿ.ಯು.ಸಿ 09/2008-09 ದಿನಾಂಕ; 08.03.2011ರಲ್ಲಿ ಸೋರ್ಸ್ ಫಾರ್ ಆಕ್ಷನ್ ಮೋಟಿವೇಶನ್ ಅಂಡ್ ಎಂಪವರ್‌ಮೆಂಟ್, ಹಾವೇರಿ ಈ ಸಂಸ್ಥೆಯು 2008-09ನೇ ಸಾಲಿನಿಂದ ಕಪ್ಪು ಪಟ್ಟಿಗೆ ಸೇರಿಸಿರುವುದಾಗಿ ವರದಿ ಮಾಡಿರುವುದರಿಂದ ಅನುದಾನವನ್ನು ತಡೆಹಿಡಿಯಲಾಗಿದೆ.

ಈ ವೆಚ್ಚವನ್ನು 2010-11ನೇ ಸಾಲಿನ ಜಿಲ್ಲಾ ವಲಯದಡಿ ಲೆಕ್ಕ ಶೀರ್ಷಿಕೆ 2202-80-800-0-18 (ಯೋಜನೆ) ಅಂಗವಿಕಲ ಮಕ್ಕಳಿಗೆ ಸಮಗ್ರ ಶಿಕ್ಷಣದ ಕೇಂದ್ರ ಪುರಸ್ಕೃತ ಯೋಜನೆಯಡಿ ನಿಗದಿಯಾಗಿರುವ ಆಯವ್ಯಯದ ಮಿತಿಯೊಳಗೆ ಲಿಂಕ್ ಕೋಡ್ 2202-80-196-6-02 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರ ಸಂಖ್ಯೆ ಆಇ 13 ಬಿ.ಜಿ.ಎಲ್. 2009 ದಿ. 11.01.2011ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ).

## ಅನುಬಂಧ-1

**ಸರ್ಕಾರದ ಆದೇಶ ಸಂಖ್ಯೆ ಇಡಿ 138 ಎಂಸಿಡಿ 2009 (ಭಾಗ-1) ದಿನಾಂಕ: 03-05-2011**

(1) ಹಾವೇರಿ ಜಿಲ್ಲೆ

(1) ಪೇಟೆ ಬಸವೇಶ್ವರ ಶಿಕ್ಷಣ ಸಂಸ್ಥೆ

**ಬಂಕಾಪುರ ಹಾವೇರಿ ಜಿಲ್ಲೆ.**

| ಕ್ರಮ ಸಂಖ್ಯೆ | ಘಟಕವಾರು ವಿವರ | ಜಿಲ್ಲಾ ಮಂಜೂರಾದ ಅನುದಾನ | ಬಿಡುಗಡೆಯಾದ 1ನೇ ಕಂತಿನ ಅನುದಾನ 50% | ಒಟ್ಟು ವೆಚ್ಚ | ಬಿಡುಗಡೆ ಮಾಡಿರುವ 2ನೇ ಕಂತಿನ ಅನುದಾನ |
|---|---|---|---|---|---|
| 1 | ಪುಸ್ತಕ ಹಾಗೂ ಲೇಖನ ಸಾಮಗ್ರಿ | 36400 | 18200 | 36400 | 18200 |
| 2 | ಸಮವಸ್ತ್ರ ಭತ್ಯೆ | 18200 | 9100 | 18200 | 9100 |
| 3 | ರೀಡರ್ ಭತ್ಯೆ | 1500 | 750 | 1500 | 750 |
| 4 | ಸಲಕರಣೆ ಭತ್ಯೆ | 30000 | 15000 | 30000 | 15000 |
| 5 | ಸಂಪನ್ಮೂಲ ಶಿಕ್ಷಕರ ವೇತನ | 278850 | 139425 | 278850 | 139425 |
| ಒಟ್ಟು | | **364950** | **182475** | **364950** | **182475** |

(2) ಅರುಣೋದಯ ಶಿಕ್ಷಣ ಸಂಸ್ಥೆ, ಕೋಡಾ, ಹಿರೇಕೆರೂರು,

**ಹಾವೇರಿ ಜಿಲ್ಲೆ,**

| ಕ್ರಮ ಸಂಖ್ಯೆ | ಘಟಕವಾರು ವಿವರ | ಜಿಲ್ಲಾ ಮಂಜೂರಾದ ಅನುದಾನ | ಬಿಡುಗಡೆಯಾದ 1ನೇ ಕಂತಿನ ಅನುದಾನ 50% | ಒಟ್ಟು ವೆಚ್ಚ | ಬಿಡುಗಡೆ ಮಾಡಿರುವ 2ನೇ ಕಂತಿನ ಅನುದಾನ |
|---|---|---|---|---|---|
| 1 | ಪುಸ್ತಕ ಹಾಗೂ ಲೇಖನ ಸಾಮಗ್ರಿ | 60400 | 30200 | 60400 | 30200 |
| 2 | ಸಮವಸ್ತ್ರ ಭತ್ಯೆ | 30200 | 15100 | 30200 | 15100 |

| | | | | | |
|---|---|---|---|---|---|
| 3 | ರೀಡರ್ ಭತ್ಯೆ | 3500 | 1750 | 3500 | 1750 |
| 4 | ಸಲಕರಣೆ ಭತ್ಯೆ | 20000 | 10000 | 20000 | 10000 |
| 5 | ಹಾಸ್ಟಲ್ ಭತ್ಯೆ | 60000 | 30000 | 60000 | 30000 |
| 6 | ಸಂಪನ್ಮೂಲ ಶಿಕ್ಷಕರ ವೇತನ | 493210 | 246605 | 493210 | 246605 |
| **ಒಟ್ಟು** | | **667310** | **333655** | **667310** | **333655** |

**ಬಿಜಾಪುರ ಜಿಲ್ಲೆ,**

ಜಯಂತಿ ಗ್ರಾಮ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಘ, ಬಿಜಾಪುರ,

| ಕ್ರಮ ಸಂಖ್ಯೆ | ಘಟಕವಾರು ವಿವರ | ಜಿಲ್ಲಾ ಮಂಜೂರಾದ ಅನುದಾನ | ಬಿಡುಗಡೆಯಾದ 1ನೇ ಕಂತಿನ ಅನುದಾನ 50% | ಒಟ್ಟು ವೆಚ್ಚ | ಬಿಡುಗಡೆ ಮಾಡಿರುವ 2ನೇ ಕಂತಿನ ಅನುದಾನ |
|---|---|---|---|---|---|
| 1 | ಪುಸ್ತಕ ಹಾಗೂ ಲೇಖನ ಸಾಮಗ್ರಿ | 16800 | 8400 | 16800 | 8400 |
| 2 | ಸಮವಸ್ತ್ರ ಭತ್ಯೆ | 8400 | 4200 | 8400 | 4200 |
| 3 | ಸಂಪನ್ಮೂಲ ಶಿಕ್ಷಕರ ವೇತನ | 173310 | 86655 | 173310 | 86655 |
| **ಒಟ್ಟು** | | **198510** | **99255** | **198510** | **99255** |

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ).

ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಯಿಂದ ಅಂಗವಿಕಲ ಮಕ್ಕಳ ಸಮನ್ವಯ ಶಿಕ್ಷಣ ಯೋಜನೆಯಡಿ ಸ್ವಯಂ ಸಂಸ್ಥೆಗಳಿಗೆ ಬಿಡುಗಡೆ ಮಾಡಿರುವ 2007–08ನೇ ಸಾಲಿನ 2ನೇ ಕಂತಿನ ಬಾಕಿ ಅನುದಾನದ ವಿವರಗಳ. (ರಿಇಂಬರ್ಸ್‌ಮೆಂಟ್)

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಬಿಡುಗಡೆ ಮಾಡಿರುವ ಹಣ ರೂಗಳಲ್ಲಿ | ಜಿಲ್ಲಾ ಪಂಚಾಯತ್ ಕೋಡ್ |
|---|---|---|---|
| 1 | ಹಾವೇರಿ ಜಿಲ್ಲೆ | 5,16,130 | 463 |
| 2 | ಬಿಜಾಪುರ | 99,255.00 | 414 |
| | ಬಿಡುಗಡೆ ಮಾಡಿರುವ ಒಟ್ಟು ಮೊತ್ತ | 6,15,385 | |

**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1260

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ರಾಜ್ಯಪಾಲರ ಸಚಿವಾಲಯದಲ್ಲಿ ಒಬ್ಬರು ಹಿಂದಿ ಬೆರಳಚ್ಚುಗಾರರಿಗೆ ಸಾರ್ವತ್ರಿಕ ರಜಾ ದಿನಗಳಲ್ಲಿ ಕಾರ್ಯನಿರ್ವಹಿಸಿರುವುದಕ್ಕೆ ಬದಲಾಗಿ ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ 30 ದಿನದ ಸಮನಾದ ವೇತನವನ್ನು ನೀಡುವ ಬಗ್ಗೆ

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಪಿಆರ್‌ಬಿ 2001, ದಿನಾಂಕ 16.6.2001

**2.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಪಿಆರ್‌ಬಿ 2001, ದಿನಾಂಕ 10.8.2001.

**3.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 9 ಪಿಆರ್‌ಬಿ 2007, ದಿನಾಂಕ 7.8.2001

**4.** ಕರ್ನಾಟಕ ರಾಜ್ಯಪಾಲರ ಕಾರ್ಯದರ್ಶಿ, ಇವರ ಅ.ಸ. ಪತ್ರ ಸಂಖ್ಯೆ: GS 33 EST 2005, ದಿನಾಂಕ 10.5.2010

**5.** ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 11 ಪಿಆರ್‌ಬಿ 2010, ದಿನಾಂಕ 16.6.2010

**6.** ಕರ್ನಾಟಕ ರಾಜ್ಯಪಾಲರ ಸಚಿವಾಲಯದ ಪತ್ರ ಸಂಖ್ಯೆ: ಜಿಎಸ್ 33 ಇಎಸ್‌ಟಿ 2005, ದಿನಾಂಕ 19.1.2011

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ರಿಂದ (3)ರಲ್ಲಿ ಓದಲಾಗಿರುವ ಆದೇಶಗಳಲ್ಲಿ ಸಾರ್ವತ್ರಿಕ ರಜಾ ದಿನಗಳಲ್ಲಿ ಕಾರ್ಯನಿರ್ವಹಿಸಿರುವುದಕ್ಕೆ ರಾಜ್ಯಪಾಲರ ಸಚಿವಾಲಯದ ಮನೆವಾರ್ತೆ ವಿಭಾಗದ ಗ್ರೂಪ್–ಸಿ ಮತ್ತು ಡಿ ಸಿಬ್ಬಂದಿ, ವಾಹನ ಚಾಲಕರು ಮತ್ತು ಶಿಷ್ಟಾಚಾರ ಕಾರ್ಯನಿರ್ವಹಿಸುತ್ತಿರುವ ಒಬ್ಬ ಕಿರಿಯ ಸಹಾಯಕ/ಸಹಾಯಕ ಇವರುಗಳಿಗೆ ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ 30 ದಿನಗಳ ಸಮನಾದ ವೇತನವನ್ನು ಪಡೆಯಲು ಮಂಜೂರಾತಿ ನೀಡಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯಪಾಲರ ಸಚಿವಾಲಯಕ್ಕೆ ಮಂಜೂರಾತಿಯಾಗಿರುವ ಹಿಂದಿ ಬೆರಳಚ್ಚುಗಾರರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಅವದೇಶ್ ಲಾಲ್ ಶ್ರೀವಾತ್ಸವ, ಇವರು ಸಹ ಪ್ರತಿದಿನ ಕಛೇರಿ ವೇಳೆಯ ನಂತರ ಹಾಗೂ ಬಹುಮಟ್ಟಿಗೆ ಸಾರ್ವತ್ರಿಕ ರಜಾ ದಿನಗಳಲ್ಲಿ ಕಾರ್ಯನಿರ್ವಹಿಸಿದ್ದು, ಇವರಿಗೂ ಸಹ 30 ದಿನಗಳ ಸಮನಾದ ವೇತನವನ್ನು ಮಂಜೂರು ಮಾಡುವಂತೆ ಕೋರಿದ್ದು,

ಮೇಲೆ ಕ್ರಮ ಸಂಖ್ಯೆ: (5)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಶ್ರೀ ಅವದೇಶ್ ಲಾಲ್ ಶ್ರೀವಾತ್ಸವ, ಇವರಿಗೆ 2011ನೇ ಸಾಲಿನಲ್ಲಿ 30 ದಿನಗಳ ರಜೆ ಭತ್ಯೆಯನ್ನು ಮಂಜೂರು ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ ಎಂದು ತಿಳಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (6)ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ 16.6.2010ರ ಪತ್ರದಲ್ಲಿ ತಿಳಿಸಿರುವ "30 ದಿನಗಳ ರಜೆ ಭತ್ಯೆ" ಇದರ ಬದಲಾಗಿ "2010ರಿಂದ 30 ದಿನಗಳ ರಜೆ ಭತ್ಯೆಯನ್ನು ಮಂಜೂರು ಮಾಡಲಾಗಿದೆ" ಎಂದು ತಿದ್ದುಪಡಿ ಮಾಡುವಂತೆ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 05 ಪಿಆರ್‌ಬಿ 2011, ಬೆಂಗಳೂರು, ದಿನಾಂಕ: 05.05.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸಾರ್ವತ್ರಿಕ ರಜಾ ದಿನಗಳಲ್ಲಿ ಸಹ ಕಾರ್ಯನಿರ್ವಹಿಸುತ್ತಿರುವ ರಾಜ್ಯಪಾಲರ ಸಚಿವಾಲಯದ ಒಬ್ಬರು ಹಿಂದಿ ಬೆರಳಚ್ಚುಗಾರರಿಗೆ ಸಹ 2010ನೇ ಸಾಲಿನಿಂದ ಜಾರಿಗೆ ಬರುವಂತೆ ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ 30 ದಿನಗಳ ಸಮನಾದ ವೇತನವನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: 481 ಸೇ: 1 2011, ದಿನಾಂಕ 12.4.2011ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ರಾಜಕೀಯ)

ಪಿ.ಆರ್. 1261

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹಾಗೂ ವಿಶೇಷಾಧಿಕಾರಿ (ಸೇವಾ ಕೈಪಿಡಿ) ಇವರ ಆಪ್ತ ಶಾಖೆಗೆ ಸಿಬ್ಬಂದಿಗಳ್ಳು ಸೃಜಿಸುವ ಬಗ್ಗೆ

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 540 ಸ.ಆ.ಸೇ. 2010 ದಿನಾಂಕ 03.12.2010.

**2.** ಸರ್ಕಾರದ ಪ್ರಧಾನ ಕಾರ್ಯದರ್ಶಿ ಹಾಗೂ ವಿಶೇಷಾಧಿಕಾರಿ (ಸೇವಾ ಕೈಪಿಡಿ) ಇವರ ಅ.ಸ. ಪತ್ರ ಸಂಖ್ಯೆ DPAR/SM/22/2011 ದಿನಾಂಕ: 23.2.2011

**3.** ಸಿಆಸುಇ (ಆಡಳಿತ ಸುಧಾರಣೆ)ಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2 ಅ.ಕಾ.ಅ 2010 ದಿನಾಂಕ: 8.3.2011

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಿಆಸುಇ ಇಲಾಖೆಯಲ್ಲಿ ಪ್ರಧಾನ ಕಾರ್ಯದರ್ಶಿ ಹಾಗೂ ವಿಶೇಷಾಧಿಕಾರಿ (ಸೇವಾ ಕೈಪಿಡಿ) ಹಾಗೂ ಇವರ ಆಪ್ತ ಶಾಖೆಗೆ ಪೂರಕ ಸಿಬ್ಬಂದಿಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಪ್ರಧಾನ ಕಾರ್ಯದರ್ಶಿ ಹಾಗೂ ವಿಶೇಷಾಧಿಕಾರಿ ಆಪ್ತ ಶಾಖೆಗೆ 1 ಆಪ್ತ ಕಾರ್ಯದರ್ಶಿ ಹಾಗೂ ವಾಹನ ಚಾಲಕ ಹುದ್ದೆಯನ್ನು ಸೃಜಿಸುವಂತೆ ಮತ್ತು ಇನ್ನುಳಿದ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 540 ಸಆಸೇ 2010 ಬೆಂಗಳೂರು, ದಿನಾಂಕ: 3ನೇ ಮೇ, 2011**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಪ್ರಧಾನ ಕಾರ್ಯದರ್ಶಿ ಹಾಗೂ ವಿಶೇಷಾಧಿಕಾರಿ (ಸೇವಾ ಕೈಪಿಡಿ) ಇವರ ಆಪ್ತ ಶಾಖೆಗೆ 1 ಆಪ್ತ ಕಾರ್ಯದರ್ಶಿ ಮತ್ತು 1 ವಾಹನ ಚಾಲಕ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 2 ಅಕಾಅ 2010 (ಭಾಗ-1) ದಿನಾಂಕ 8.3.2011 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 371 ವೆಚ್ಚ 12/2011 ದಿನಾಂಕ: 18.4.2011 ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. 1262

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ವಿ. ವೇದಮೂರ್ತಿ ಕೆ.ಎ.ಎಸ್ (ಸೂ.ಟೈಂ) ಅಧಿಕಾರಿ ಹಿಂದಿನ ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ-ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ: 1.** ಸರ್ಕಾರಿ ಆದೇಶ ಸಂ: ಸಿಆಸುಇ 42 ಕೆಇವಿ 2008 ದಿ: 13.8.10

**2.** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಕಾರ್ಯದರ್ಶಿಯವರ ಅ.ಟಿ. ಸಂ: ಮಮಇ 142 ಎಸ್‌ಜೆಡಿ 08 (ಭಾಗ-1) ದಿ: 13.4.11.

**ಪ್ರಸ್ತಾವನೆ :**

ಶ್ರೀ ಎಂ.ವಿ. ವೇದಮೂರ್ತಿ, ಕೆ.ಎ.ಎಸ್ (ಸೂ.ಟೈಂ) ಅಧಿಕಾರಿ ರವರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿರುವ ಕರ್ತವ್ಯ ಲೋಪ ಹಾಗೂ ದುರ್ನಡತೆಗೆ ಸಂಬಂಧಿಸಿದಂತೆ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿ: 13.08.10ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು

ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಸರ್ಕಾರದ ಉಪ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರು ಮೇಲೆ ಕ್ರಮ ಸಂ:(2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಈ ಇಲಾಖಾ ವಿಚಾರಣೆಯಲ್ಲಿ ಆರೋಪಿತ ಅಧಿಕಾರಿಯ ವಿರುದ್ಧ 14 ಆರೋಪಗಳನ್ನು ಮಾಡಲಾಗಿದ್ದು ಈ ಆರೋಪಗಳನ್ನು ಸಮರ್ಥಿಸಲು ಸುಮಾರು 11 ಸಾಕ್ಷಿಗಳನ್ನು ಮಾಡಲಾಗಿದ್ದು, 26 ದಾಖಲೆಗಳನ್ನು ಪರಿಶೀಲಿಸಿ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಬೇಕಾಗಿರುವುದರಿಂದ ಆಡಳಿತ ಇಲಾಖೆಯಲ್ಲಿ ಉಪ ಕಾರ್ಯದರ್ಶಿ ರವರ ಹುದ್ದೆಯನ್ನು ಜಂಟಿ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಬಡ್ತಿ ನೀಡಿದ್ದು, ಇಲಾಖೆಗೆ ಸಂಬಂಧಿಸಿದ ವಿಧಾನಮಂಡಲದ ಸಮಿತಿಯ ಸಭೆಯನ್ನು ಕರೆಯಲಾಗುತ್ತಿದ್ದು, ಈ ಸಮಿತಿಗೆ ಬೇಕಾಗಿರುವ ಎಲ್ಲಾ ಮಾಹಿತಿಯನ್ನು ನಿಗದಿತ ಸಮಯದಲ್ಲಿ ಒದಗಿಸಬೇಕಾಗಿದ್ದು, ಈ ಎಲ್ಲಾ ಕೆಲಸ ಕಾರ್ಯಗಳನ್ನು ಜಂಟಿ ಕಾರ್ಯದರ್ಶಿರವರು ಸಮರ್ಪಕವಾಗಿ ನಿರ್ವಹಿಸಬೇಕಾಗಿರುವುದರಿಂದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ನಿಖರವಾದ ಮಾಹಿತಿ ಮತ್ತು ಸಾಕ್ಷಿಗಳನ್ನು ಸಂಗ್ರಹಿಸಿ ವಿಚಾರಣಾಧಿಕಾರಿಗಳ ಮುಂದೆ ಮಂಡಿಸುವುದು ಕಷ್ಟ ಸಾಧ್ಯವಾಗಿರುವುದರಿಂದ ಸರ್ಕಾರದ ಪರವಾಗಿ ನ್ಯಾಯ ದೊರಕಬೇಕೆಂಬ ಹಿನ್ನೆಲೆಯಲ್ಲಿ ಪ್ರಸ್ತುತ ನೇಮಿಸಿರುವ ಮಂಡನಾಧಿಕಾರಿ ಬದಲಾಗಿ ಶ್ರೀ ಚೆನ್ನಯ್ಯ, ಸಹಾಯಕ ನಿರ್ದೇಶಕರು ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರನ್ನು ಈ ವಿಚಾರಣೆಗೆ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಬದಲಿ ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ: ಸಿಆಸುಇ 42 ಕೆಇವಿ 2008, ಬೆಂಗಳೂರು ದಿ: 04ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ವಿ. ವೇದಮೂರ್ತಿ (ಸೂಪರ್ ಟೈಂ ಸ್ಕೇಲ್) ಅಧಿಕಾರ ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಈ ಹಿಂದೆ ನೇಮಿಸಿದ್ದ ಸರ್ಕಾರದ ಉಪ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಬದಲಾಗಿ ಶ್ರೀ ಚೆನ್ನಯ್ಯ, ಸಹಾಯಕ ನಿರ್ದೇಶಕರು ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ಮಂಡನಾಧಿಕಾರಿಗಳು ವಿಚಾರಣಾಧಿಕಾರಿಗಳೊಂದಿಗೆ ಸಹಕರಿಸಿ ವಿಚಾರಣಾ ವರದಿಯನ್ನು ಸಲ್ಲಿಸಲು ಶೀಘ್ರ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2)

ಪಿ.ಆರ್. 1263

## ಇಂಧನ ಸಚಿವಾಲಯ

**ವಿಷಯ:** ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ: 1.** ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್ಆರ್ 2002 ದಿನಾಂಕ: 31-05-02

**2.** ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್ಆರ್ 2002 ದಿನಾಂಕ: 19-12-02

**3** ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರ ಸಂಖ್ಯೆ: ನಿ(ಪಿ ಮತ್ತು ಉಟ್ರಸ್ಟ್)/ ಕ-21/ಸ-503-06 ದಿನಾಂಕ 07-04-2011

**ಪ್ರಸ್ತಾವನೆ :**

(1) ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರ.ನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

(2) ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದ ಪ್ರಕಾರ, ಕವಿಪ್ರ.ನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay As You Go ಪದ್ಧತಿಯನ್ನು ಅನುಸರಿಸಿ ಕವಿಪ್ರ.ನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

(3) 2011-12 ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801-80-101-1-13-106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 400.00 ಕೋಟಿ ರೂ. ನಿಗದಿಪಡಿಸಲಾಗಿರುತ್ತದೆ.

(4) ಮೇಲೆ ಕ್ರಮಾಂಕ-3ರಲ್ಲಿ ಓದಲಾದ ಪತ್ರದಲ್ಲಿ ಪಿಂಚಣಿ ಹಣ 200 ಕೋಟಿ ರೂ. ಗಳನ್ನು ಆರ್ಥಿಕ ವರ್ಷ 2011-12 ಕ್ಕೆ ಪಾವತಿಸಲು ಹಾಗೂ ಹಿಂದಿನ ಬಾಕಿ 630.45 ಕೋಟಿ ರೂ. ಗಳನ್ನು ಪಾವತಿಸಲು ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಅಧ್ಯಕ್ಷರು ಸರ್ಕಾರವನ್ನು ಕೋರಿರುತ್ತಾರೆ.

(5) ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, 2011–12ನೇ ಸಾಲಿನಲ್ಲಿ ಮೊದಲನೇ ಕಂತು 100 ಕೋಟಿ ರೂ. ಗಳ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2011 ಬೆಂಗಳೂರು ದಿನಾಂಕ 29–04–2011**

ಸರ್ಕಾರವು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ 2011–12ನೇ ಸಾಲಿನಲ್ಲಿ ಪಿಂಚಣಿ ವಂತಿಗೆ 100 ಕೋಟಿ ರೂ. ಗಳನ್ನು (ನೂರು ಕೋಟಿ ರೂ. ಗಳು ಮಾತ್ರ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು "2801–80–101–1–13–106 ಸಹಾಯಧನ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ" ಹಣ ಪಡೆದ 2 ದಿನದೊಳಗೆ ಪೂರ್ಣವಾಗಿ ಪಾವತಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 712 ವೆಚ್ಚ–1/2011 ದಿನಾಂಕ 27–04–2011 ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 1264

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಡಾ: ಗೋಪಾಲಗೌಡ, ಸಹಾಯಕ ನಿರ್ದೇಶಕರು (ನಿವೃತ್ತ) ಪಶುಪಾಲನಾ ಇಲಾಖೆ ಇವರಿಗೆ ಉಪ ನಿರ್ದೇಶಕರ ಹುದ್ದೆಯಲ್ಲಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಿ ಪೂರ್ವಾನ್ವಯವಾಗಿ ಆರ್ಥಿಕ ಸೌಲಭ್ಯಗಳನ್ನು ನೀಡುವ ಬಗ್ಗೆ.

**ಓದಲಾಗಿದೆ: 1.** ಡಾ: ಗೋಪಾಲಗೌಡ, ಸಹಾಯಕ ನಿರ್ದೇಶಕರು (ನಿವೃತ್ತ) ಪಶುಪಾಲನಾ ಇಲಾಖೆ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿ ದಿನಾಂಕ: 09-09-2000.

**2.** ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 2773/2000, ದಿನಾಂಕ: 16-04-2008.

**3.** ಪತ್ರ ಸಂಖ್ಯೆ: ಆಪಸಂ/ಸಿ–1/ವಿವ–69/97-98/2007-08, ದಿನಾಂಕ: 12-09-2008.

**4.** ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–1/ವಿವ–69//2007-08, ದಿನಾಂಕ: 01-01-2009.

**5.** ಪತ್ರ ಸಂಖ್ಯೆ: ಆಪಸಂ/ಸಿ–1/ವಿವ–69/1997-98, ದಿನಾಂಕ: 28-07-2009, 03-03-2010 ಹಾಗೂ 10-01-2011.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರನ್ವಯ ಓದಲಾದ ಮನವಿಯಲ್ಲಿ ಡಾ: ಗೋಪಾಲಗೌಡ, ಸಹಾಯಕ ನಿರ್ದೇಶಕರು (ನಿವೃತ್ತ) ಪಶುಪಾಲನಾ ಇಲಾಖೆ ಇವರು ತಮ್ಮ ಹೆಸರನ್ನು ಉಪ ನಿರ್ದೇಶಕರ ವೃಂದದಲ್ಲಿ ಸೇರ್ಪಡೆಗೊಳಿಸಿ, ತಮಗಿಂತ ಸೇವೆಯಲ್ಲಿ ಕಿರಿಯ ಅಧಿಕಾರಿಗಳಿಗಿಂತ ಮೊದಲು ಅರ್ಹತಾ ದಿನಾಂಕವನ್ನು ನಿಗದಿಪಡಿಸುವಂತೆ ಹಾಗೂ ಅರ್ಹತಾ ದಿನಾಂಕಕ್ಕೆ ಅನುಗುಣವಾಗಿ ಅವರ ವೇತನವನ್ನು ಮರು ನಿಗದಿಪಡಿಸಿ ಪಿಂಚಣಿ ಸೌಲಭ್ಯವನ್ನು ಪರಿಷ್ಕರಿಸಲು ಹಾಗೂ ವೇತನ ಬಾಕಿಯನ್ನು ಪಾವತಿಸಲು ಸಂಬಂಧಪಟ್ಟ ಪ್ರಾಧಿಕಾರಕ್ಕೆ ನಿರ್ದೇಶನ ನೀಡುವಂತೆ ಕೋರಿರುತ್ತಾರೆ.

2. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದಂತೆ ಡಾ: ಗೋಪಾಲಗೌಡ, ಸಹಾಯಕ ನಿರ್ದೇಶಕರು (ನಿವೃತ್ತ) ಪಶುಪಾಲನಾ ಇಲಾಖೆ ಇವರು ಉಪ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ಹಾಗೂ ಆರ್ಥಿಕ ಸೌಲಭ್ಯಗಳನ್ನು ಪಡೆಯುವ ಸಂಬಂಧ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 2773/2000ನ್ನು ದಾಖಲಿಸಿದ್ದು, ಸದರಿ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ:16-04-2008ರಂದು ನೀಡಿರುವ ಆದೇಶದಲ್ಲಿ ಅರ್ಜಿದಾರರ ದಿನಾಂಕ: 09-09-2000ರ ಮನವಿಯನ್ನು ಪರಿಗಣಿಸಿ, ನಿಯಮಾನುಸಾರ ಸೂಕ್ತ ಆದೇಶವನ್ನು ಹೊರಡಿಸುವಂತೆ ನಿರ್ದೇಶನ ನೀಡಿ ಅರ್ಜಿಯನ್ನು ವಿಲೆಗೊಳಿಸಿದೆ.

3. ಮೇಲೆ ಕ್ರಮ ಸಂಖ್ಯೆ (3), (4) ಮತ್ತು (5)ರಲ್ಲಿ ಓದಲಾದ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಡಾ: ಗೋಪಾಲಗೌಡ ಇವರ ಜೇಷ್ಠತಾ ಸಂಖ್ಯೆ: 360 ಆಗಿದ್ದು, ಅವರಿಗಿಂತ ಹಿರಿಯ ಅಧಿಕಾರಿಯಾದ ಡಾ: ಬಿ.ಹನುಮಂತಪ್ಪ ಇವರ ಜೇಷ್ಠತಾ ಸಂಖ್ಯೆ: 359 ಮತ್ತು ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದ ಇವರ ಜೇಷ್ಠತಾ ಸಂಖ್ಯೆ: 366 ಆಗಿರುತ್ತದೆಂದು, ಡಾ: ಬಿ. ಹನುಮಂತಪ್ಪ, ಡಾ: ಎಸ್. ಅಂತೋಣಿ ದಯಾನಂದ ಇವರುಗಳಿಗೆ ದಿನಾಂಕ: 07-12-1997 ರಂದು ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ ಎಂದು ತಿಳಿಸಿರುತ್ತಾರೆ. ಡಾ: ಗೋಪಾಲಗೌಡ ಇವರ 1990-91 ರಿಂದ 1994-95ರವರೆಗಿನ ವಿಶೇಷ ವರದಿಗಳು ತೃಪ್ತಿಕರವಾಗಿದ್ದು, ಸದರಿ ಅವಧಿಯಲ್ಲಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ನ್ಯಾಯಾಂಗ ತನಿಖೆ/ ದಂಡ ವಿಧಿಸುವ ಪ್ರಕರಣಗಳು ಇರುವುದಿಲ್ಲವೆಂದು ಹಾಗೂ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಹೊಂದಲು ಅರ್ಹರಿರುತ್ತಾರೆಂದು ದೃಢೀಕರಿಸಿರುತ್ತಾರೆ. ಡಾ: ಗೋಪಾಲಗೌಡ ಇವರು ದಿನಾಂಕ:30-09-1995 ರಂದು ನಿವೃತ್ತಿ ಹೊಂದಿರುವುದರಿಂದ ಅವರಿಗೆ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಆಗಿರುವುದಿಲ್ಲವೆಂದು, ತದನಂತರ ಡಾ: ಬಿ.ಹನುಮಂತಪ್ಪ, ಡಾ: ಎಸ್.ಅಂತೋಣಿ ದಯಾನಂದ ಇವರುಗಳಿಗೆ ಉಪ ನಿರ್ದೇಶಕರ ಹುದ್ದೆಯ ಮುಂಬಡ್ತಿ ದಿನಾಂಕದ ಅರ್ಹತಾ ದಿನಾಂಕ 02-01-1995 ರಂದು ನಿಗದಿಯಾಗಿದ್ದು ಈ ಅವಧಿಯಲ್ಲಿ ಡಾ: ಗೋಪಾಲಗೌಡ ಇವರು ಸೇವೆಯಲ್ಲಿ ಮುಂದುವರೆಯುತ್ತಿದ್ದ ಕಾರಣ ಹಾಗೂ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಹೊಂದಲು ಅರ್ಹರಿರುವುದರಿಂದ, ಸದರಿ ಅಧಿಕಾರಿಗೆ ಕರ್ನಾಟಕ

ನಾಗರಿಕ ಸೇವೆಗಳು ಆಕ್ಟ್ 1974 ನಿಯಮ 6ರನ್ವಯ ಕಾಲ್ಪನಿಕವಾಗಿ ದಿನಾಂಕ:02-01-1995 ರಿಂದ ವೇತನ ನಿಗದಿಪಡಿಸಿ, ಪಿಂಚಣಿ ಸೌಲಭ್ಯವನ್ನು ನೀಡುವ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಶ್ರೀಯುತರು ಸ್ಥಾನಪನ್ನ ಮುಂಬಡ್ತಿ ಹೊಂದಿರದ ಕಾರಣ, ವೇತನ ಬಾಕಿಗೆ ಅರ್ಹರಿರುವುದಿಲ್ಲವೆಂದು ತಿಳಿಸಿರುತ್ತಾರೆ.

4. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಸಹಾಯಕ ನಿರ್ದೇಶಕರ ವೃಂದದ 2000ರ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಡಾ: ಗೋಪಾಲಗೌಡ, ಇವರ ಜೇಷ್ಠತಾ ಸಂಖ್ಯೆಯು 360 ಆಗಿದ್ದು, ಡಾ: ಎಸ್.ಅಂತೋಣಿ ದಯಾನಂದ ಇವರ ಜೇಷ್ಠತಾ ಸಂಖ್ಯೆ: 366 ಆಗಿರುತ್ತದೆ. ಜೇಷ್ಠತೆಯಲ್ಲಿ / ಸೇವೆಯಲ್ಲಿ ಡಾ: ಗೋಪಾಲಗೌಡ ಹಿರಿಯ ಅಧಿಕಾರಿಯಾಗಿದ್ದು ಡಾ: ಎಸ್.ಅಂತೋಣಿ ದಯಾನಂದ ಇವರು ಕಿರಿಯ ಅಧಿಕಾರಿಯಾಗಿರುತ್ತಾರೆ. ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದ ಇವರು ದಿನಾಂಕ:07-12-1997ರಂದು ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿದ್ದು, ತದನಂತರ ಅವರಿಗೆ ಉಪ ನಿರ್ದೇಶಕ ಹುದ್ದೆಗೆ ಮುಂಬಡ್ತಿ ಹೊಂದಲು ಅರ್ಹತಾ ದಿನಾಂಕ: 02-01-1995 ಎಂದು ನಿಗದಿಪಡಿಸಿ ಕರ್ನಾಟಕ ನಾಗರಿಕ ಸೇವಾ ನಿಯಮ (ಆರ್‌ಪಿಪಿ) ಕಾಯ್ದೆ 1973 ಸೆಕ್ಷನ್ 4(3)ರ ಪ್ರಕಾರ ವೇತನ ನಿಗದಿಪಡಿಸಲು ಹಾಗೂ ನೈಜ ಬಡ್ತಿ ಹೊಂದಿದ ದಿನಾಂಕದಿಂದ ಆರ್ಥಿಕ ಸೌಲಭ್ಯವನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ. ಡಾ: ಗೋಪಾಲಗೌಡ, ಇವರು ದಿನಾಂಕ:30-09-1995 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿದ್ದರಿಂದ ಅವರಿಗಿಂತ ಸೇವೆಯಲ್ಲಿ ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದ ಇವರಿಗೆ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿದಾಗ (ದಿನಾಂಕ:07-12-1997) ಅವರನ್ನು ಉಪ ನಿರ್ದೇಶಕರ ಹುದ್ದೆಯ ಮುಂಬಡ್ತಿಗೆ ಪರಿಗಣಿಸಿರುವುದಿಲ್ಲ. ಆದರೆ ಡಾ: ಎಸ್.ಅಂತೋಣಿ ದಯಾನಂದ ಇವರಿಗೆ ಉಪ ನಿರ್ದೇಶಕ ಹುದ್ದೆಯ ಮುಂಬಡ್ತಿ ಅರ್ಹತಾ ದಿನಾಂಕ 02-01-1995 ಎಂದು ನಿಗದಿಪಡಿಸಿದ್ದು ಆ ದಿನಾಂಕದಂದು ಡಾ: ಗೋಪಾಲಗೌಡರವರು ಸರ್ಕಾರಿ ಸೇವೆಯಲ್ಲಿದ್ದ ಕಾರಣ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಹೊಂದಲು ಅರ್ಹರಿರುತ್ತಾರೆ. ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದ ಇವರನ್ನು ದಿನಾಂಕ:07-12-1997ರಿಂದ ಮುಂಬಡ್ತಿಗೆ ಪರಿಗಣಿಸಿರುವುದರಿಂದ ಹಿರಿಯ ಅಧಿಕಾರಿಯಾದ ಡಾ: ಗೋಪಾಲಗೌಡ ಇವರಿಗೆ ದಿನಾಂಕ: 02-01-1995 ರಿಂದ ಭವಿಷ್ಯವರ್ತಿಯಾಗಿ ಮುಂಬಡ್ತಿ ನೀಡಲು ಅವಕಾಶವಿರುವುದಿಲ್ಲ. ಅದರೆ ಕಿರಿಯ ಅಧಿಕಾರಿಗೆ ಉಪ ನಿರ್ದೇಶಕರ ಹುದ್ದೆಯ ಮುಂಬಡ್ತಿಯ ಅರ್ಹತಾ ದಿನಾಂಕ 02-01-1995 ಎಂದು ನಿಗದಿಪಡಿಸಿರುವುದರಿಂದ ಹಿರಿಯ ಅಧಿಕಾರಿಯಾದ ಡಾ: ಗೋಪಾಲಗೌಡ ಇವರಿಗೆ ದಿನಾಂಕ:02-01-1995ರಿಂದ ಅನ್ವಯಿಸುವಂತೆ ಉಪ ನಿರ್ದೇಶಕರ ಹುದ್ದೆಯಲ್ಲಿ ಮುಂಬಡ್ತಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಬಹುದಾಗಿದೆ. ತದನಂತರ ಅರ್ಹತಾ ದಿನಾಂಕದ ಮೇರೆಗೆ ಅವರ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಿ, ಕಾಲ್ಪನಿಕ ವೇತನ ನಿಗದಿ ಆಧಾರದ ಮೇಲೆ ಪಿಂಚಣಿಯನ್ನು ಪರಿಷ್ಕರಿಸಬಹುದಾಗಿರುತ್ತದೆ. ಡಾ: ಗೋಪಾಲಗೌಡ, ಇವರ ವಿರುದ್ಧ ಇಲಾಖಾ ವಿಚಾರಣೆ / ಲೋಕಾಯುಕ್ತ ಪ್ರಕರಣ / ನ್ಯಾಯಾಂಗ ಪ್ರಕರಣ / ಕ್ರಿಮಿನಲ್ ಮೊಕದ್ದಮೆ / ದಂಡನೆ ವಿಧಿಸುವ ಪ್ರಕರಣಗಳು ಬಾಕಿ ಇರುವುದಿಲ್ಲ. ಅವರ 1990-91 ರಿಂದ 1994-95ರವರೆಗಿನ ವಿಶೇಷ ವರದಿಗಳು ತೃಪ್ತಿಕರವಾಗಿದ್ದು, ಅದರಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. 1995ಕ್ಕೂ ಹಿಂದಿನ 5 ವರ್ಷಗಳ ಅವಧಿಯಲ್ಲಿ ಸದರಿ ಅಧಿಕಾರಿಯ ಕಾರ್ಯನಿರ್ವಹಣೆ / ಸೇವೆಯು ತೃಪ್ತಿಕರವಾಗಿದ್ದು, ನಿಯಮಾನುಸಾರ ಮುಂಬಡ್ತಿ ಹೊಂದಲು ಅರ್ಹರಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಸೇವೆಯಲ್ಲಿ / ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದರವರಿಗೆ ಉಪ ನಿರ್ದೇಶಕರ ಹುದ್ದೆಯಲ್ಲಿ ನಿಗದಿಪಡಿಸಿದ ಅರ್ಹತಾ ದಿನಾಂಕವನ್ನಾಧರಿಸಿ ಸೇವೆಯಲ್ಲಿ / ಜೇಷ್ಠತೆಯಲ್ಲಿ ಡಾ: ಎಸ್.ಅಂತೋಣಿ ದಯಾನಂದ ಇವರಿಗಿಂತಲೂ ಹಿರಿಯ ಅಧಿಕಾರಿಯಾದ ಡಾ: ಗೋಪಾಲಗೌಡ ಇವರಿಗೆ ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ಅಧಿನಿಯಮ, 1973ರ ಸೆಕ್ಷನ್ 4ರನ್ವಯ ಉಪ ನಿರ್ದೇಶಕರ ಹುದ್ದೆಯಲ್ಲಿ ಅರ್ಹತಾ ದಿನಾಂಕ 02-01-1995 ಎಂದು ನಿಗದಿಪಡಿಸಲು ಹಾಗೂ ಅರ್ಹತಾ ದಿನಾಂಕದ ಆಧಾರದ ಮೇಲೆ ವೇತನ ಬಾಕಿಗೆ ಅರ್ಹರಿರುವುದಿಲ್ಲವೆಂಬ ಷರತ್ತಿಗೊಳಪಡಿಸಿ ಸದರಿ ಅಧಿಕಾರಿಗೆ ಕಾಲ್ಪನಿಕವಾಗಿ (ತಾತ್ವಿಕವಾಗಿ) ವೇತನ ನಿಗದಿಪಡಿಸಲು ಮತ್ತು ಕಾಲ್ಪನಿಕ ವೇತನ ನಿಗದಿಯನ್ನಾಧರಿಸಿ ಪಿಂಚಣಿಯನ್ನು ಪರಿಷ್ಕರಿಸಲು ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 20 ಪಅಸೇ 20 2011, ಬೆಂಗಳೂರು, ದಿನಾಂಕ 18ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಸೇವೆಯಲ್ಲಿ / ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಡಾ: ಎಸ್.ಅಂತೋಣಿ ದಯಾನಂದ ಇವರಿಗೆ (ಜೇಷ್ಠತಾ ಸಂಖ್ಯೆ: 366) ಉಪ ನಿರ್ದೇಶಕರ ಹುದ್ದೆಯಲ್ಲಿ ನಿಗದಿಪಡಿಸಿದ ಅರ್ಹತಾ ದಿನಾಂಕವನ್ನಾಧರಿಸಿ, ಸೇವೆಯಲ್ಲಿ / ಜೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾದ ಡಾ: ಗೋಪಾಲಗೌಡ, ನಿವೃತ್ತ ಸಹಾಯಕ ನಿರ್ದೇಶಕರು (ಜೇಷ್ಠತಾ ಸಂಖ್ಯೆ: 360) ಇವರಿಗೆ ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ಅಧಿನಿಯಮ, 1973ರ ಸೆಕ್ಷನ್ 4ರನ್ವಯ ಉಪ ನಿರ್ದೇಶಕರ ಹುದ್ದೆಯಲ್ಲಿ ಅರ್ಹತಾ ದಿನಾಂಕ(Deemed date of eligibility) 02-01-1995 ಎಂದು ನಿಗದಿಪಡಿಸಿದೆ.

ಡಾ: ಗೋಪಾಲಗೌಡ ಇವರ ವೇತನವನ್ನು ಅರ್ಹತಾ ದಿನಾಂಕದ ಆಧಾರದ ಮೇಲೆ "ವೇತನ ಬಾಕಿಗೆ ಅರ್ಹರಿರುವುದಿಲ್ಲ" ಎಂಬ ಷರತ್ತಿಗೊಳಪಡಿಸಿ ಕಾಲ್ಪನಿಕವಾಗಿ (ತಾತ್ವಿಕವಾಗಿ) ನಿಗದಿಪಡಿಸಲು ಹಾಗೂ ಸದರಿಯವರ ಪಿಂಚಣಿಯನ್ನು ಕಾಲ್ಪನಿಕ ವೇತನ ನಿಗದಿಯನ್ನಾಧರಿಸಿ ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ಅಧಿನಿಯಮ, 1973ರ ಸೆಕ್ಷನ್ 6 ರನ್ವಯ ಪರಿಷ್ಕರಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಟಿಪ್ಪಣಿ ಸಂಖ್ಯೆ: ಸಿಆಸುಇ 36 ಸೇನಿಎ 2009, ದಿನಾಂಕ: 10-02-2009ರಲ್ಲಿ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 514 ವೆ4/2009, ದಿನಾಂಕ; 06-11-2009 & ಆಇ 514 ವೆ4/2009, ದಿನಾಂಕ: 25-05-2010 ಗಳಲ್ಲಿ ನೀಡಿರುವ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1265

**ಬಿ.ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

## Water Resources Secretariat

**Sub:** Government of India Scheme for providing Central Assistance to the State Governments for Flood Control and River Management Schemes under Flood Management Programme – A State Sector Scheme (2007-12)-Regarding according Administrative approval to the DPRs regarding

**Read: 1**. Leter No. 4/43/Karnataka/2008-FMP from Flood Management Planning Directorate, CWS, Government of India

**2.** Letter No. CEMI(S)/TA-2 AE-5/PRANIKA/2011-12/1895, dt. 29.04.2011, from the Chief Engineer, Minor Irrigation South Zone, Bangalore

**Preamble:**

Government of India has issued Administrative Approval vide order F No. 5/7/2006-Ganga(Vol-II)4749-77 dated: 28.11.2007, Ministry of Water Resources, Ganga Wing, Government of India. The Scheme is "Flood Management Programme" under State Sector for under taking Flood Control and River Management works in the entire country during the XI Plan.

The highlights of this scheme as per the Government of India approval and guidelines are as follows.

a) The Scheme is approved in principle by Government of India However; detailed proposal(s) for each work would be prepared and submitted by the implementing agency.

b) The critical flood management and erosion control works including drainage development and sea erosion works would be considered for central assistance under the Scheme depending upon the critical situation.

c) The restoration of damaged flood management works would also be provided central assistance under the Scheme if such works are not covered under Calamity Relief Fund or National Calamity Contingency Fund.

d) Karnataka State is included under non-special categoy states. For this the central share is at 75% and State share is at 25%. For the restoration of damaged works central share is 90% and the State share is 10%

Government order No. Saneeyee 15 Saneevi 2007 dated 01.07.2010 is issued for implementation of this scheme from 2010-11. Out of the 8 Detailed Project Reports submitted to Government of India, proposals in respect of the following two works are submitted for the approval of the Empowered Committee on Flood Management Programme.

| Sl. No. | Name of the Scheme | Estimated Cost Rs. in Crores | Population to be benefitted | B.C.Ratio |
|---|---|---|---|---|
| 1. | Flood Protection works on Right bank Hemavathi River (ch.29.50 Km to 31.50 Km) at Holenarasipura of Hassan district | 25.48 | 40.000 | 1.71 |
| 2. | Flood Protection works along the banks of river Tunga at Shimoga town from ch. 11.754 Km to 14.41 Km and Mattur village from ch. 6.008 Km to 7,036 in Shimoga district | 55.18 | 40.000 | 1.50 |
| | **Total** | **80.66** | | |

It is considered to accord administrative approval to the above 2 works under the head of account "4711-01-103-2-02-139- River Management and Flood Control Major Works"

**Government Order No. SANEEYEE 02 PRANIKA 2011 (Tech) Bangalore, dated: 09.05.2011**

Under the above circumstances, administrative approval is hereby accorded for taking up the above two works with an estimated cost totaling to Rs. 80.66 crores (Rupees Eighty crores Sixty six lakhs only) subject to the following conditions.

1. Implementation of these projects should be taken up only after receipt of necessary approval from the GOI
2. The projects are to be completed within a period specified by Government of India.
3. The funding of the scheme is in the ratio of 75:25 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP Act.
6. The schemes shall be implemented as per the conditions and the guidelines issued by the GOI
7. The implementation of the project shall be as per the required technical specifications and financial specifications as per the approved DPRs
8. Technical sanction shall be accorded after getting necessary approval of the Cabinet.

By Order and in the name of the Governor of Karnataka,

P.R. 1266

**RUDRAMURTHY**

Ex officio Under Secretary to Government

Water Resources Department (Minor Irrigation)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಗಂಗಾವತಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–I) ಸರ್ಕಾರದ ಅಂತಿಮ ಅನುಮೋದನೆ ನೀಡುವ ಸಂಬಂಧ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ:ನಅಇ 33 ಗುಅಪಾ: 2009, ಬೆಂಗಳೂರು, ದಿ:18.03.2009.

**2.** ಗಂಗಾವತಿ ನಗರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ:ನಯೋಪ್ರಾಗಂ/ಮಹಾಯೋಜನೆ/2010–11/62, ದಿನಾಂಕ:23.12.2010.

**3.** ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ:ನಗ್ರಾಯೋ:ಉನಿ (ಯೋವಿ): ಗಂಗಾವತಿ:ಮ.ಯೋ:2010–11ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಗಂಗಾವತಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–I)ಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಗಂಗಾವತಿ ನಗರ ಯೋಜನಾ ಪ್ರಾಧಿಕಾರವು ಗಂಗಾವತಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪ–I) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಗಂಗಾವತಿ ಪಟ್ಟಣದ ಜನಸಂಖ್ಯೆ 2021ರಲ್ಲಿ 1,80,000ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಗಂಗಾವತಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 2671.04ಹೆಕ್ಟೇರ್ ಪ್ರದೇಶದಲ್ಲಿ 1961.54 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (12)ರಲ್ಲಿನ ಅಂಶಗಳನ್ನು ಪರಿಗಣಿಸಿ ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 1806.02 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 1008.57 ಹೆಕ್ಟೇರ್, (ಶೇ.55.84), ವಾಣಿಜ್ಯಕ್ಕಾಗಿ 135.15 ಹೆಕ್ಟೇರ್ (ಶೇ.7.48), ಕೈಗಾರಿಕೆಗಾಗಿ 156.22 ಹೆಕ್ಟೇರ್ (ಶೇ.8.65), ಸಾರ್ವಜನಿಕ:ಅರೆ ಸಾರ್ವಜನಿಕ ಉಪಯೋಗಕ್ಕೆ 97.90 ಹೆಕ್ಟೇರ್, (ಶೇ.5.42) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 148.10 ಹೆಕ್ಟೇರ್ (ಶೇ.8.20) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 260.08 ಹೆಕ್ಟೇರ್ (ಶೇಕಡ 14.41), ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆ (ಪ–I)ನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಆದ್ದರಿಂದ ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 11 ಗುಅಪ್ರಾ 2011, ಬೆಂಗಳೂರು, ದಿನಾಂಕ:26.04.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗಂಗಾವತಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–I)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಅಂತಿಮ ಅನುಮೋದನೆ ನೀಡಲಾಗಿದೆ. ಮಹಾಯೋಜನೆ (ಪ–I)ಕ್ಕೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1267

## ನಗರಾಭಿವೃದ್ಧಿ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ನಅಇ 30 ಗುಅಪ್ರಾ 2011 ಬೆಂಗಳೂರು, ದಿನಾಂಕ: 28.04.2011

ಬಳ್ಳಾರಿ ಜಿಲ್ಲೆ, ವಿಜಯನಗರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾದ ಮಧ್ಯಂತರ ಮಹಾ ಯೋಜನೆಗೆ ಸರ್ಕಾರದ ಅನುಮೋದನೆಯನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 30 ಗುಅಪ್ರಾ 2011 ದಿನಾಂಕ: 21.04.2011ರಂದು ಹೊರಡಿಸಲಾಗಿದ್ದು, ಸದರಿ ಆದೇಶದ ಭಾಗದಲ್ಲಿನ 1ನೇ ಕಂಡಿಕೆಯಲ್ಲಿ **ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವವರೆಗೆ ಎಲ್ಲಾ ಭೂ ಪರಿವರ್ತನೆಗಳಿಗೆ ಸರ್ಕಾರದ ಪೂರ್ವಾನುಮತಿ ಪಡೆಯುವ ಷರತ್ತಿಗೊಳಪಟ್ಟು** ಎಂಬುದನ್ನು ಹೊರತುಪಡಿಸಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1268

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರಿನ ಹೊಸೂರು ರಸ್ತೆಯನ್ನು ಅಗಲೀಕರಣಗೊಳಿಸಲು ಸುಧಾರಣಾ ಸಂಸ್ಥೆಯ ಆವರಣದ ಮುಂದಿನ ಜಮೀನಿನಲ್ಲಿ 96 ಚದರ ಮೀಟರ್‌ಗಳಷ್ಟು ಭೂಮಿಯನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವರ್ಗಾಯಿಸುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪ್ರಸ್ತಾವನೆ ಸಂಖ್ಯೆ. ಮಮಅಇ/ಪಿಡಿಎಂ/ ನಿರ್ವೇಶನ/15/2010–11, ದಿನಾಂಕ: 26.07.2010 ಮತ್ತು 22.03.2011.

**ಪ್ರಸ್ತಾವನೆ :**

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರದಲ್ಲಿ ಬೆಂಗಳೂರಿನ ಹೊಸೂರು ರಸ್ತೆಯನ್ನು ಲಾಲ್‌ಬಾಗ್ ಮುಖ್ಯ ದ್ವಾರದಿಂದ ಎನ್.ಕೆ. ಕಾರ್ಖಾನೆವರೆಗೆ ಅಭಿವೃದ್ಧಿ ಹಾಗೂ ಅಗಲೀಕರಣ ಕಾರ್ಯಕೈಗೊಂಡಿದ್ದು ಸದರಿ ಅಗಲೀಕರಣ ವ್ಯಾಪ್ತಿಯಲ್ಲಿ ಬರುವ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸುಧಾರಣಾ ಸಂಸ್ಥೆಯ ಆವರಣದ ಮುಂದಿನ ಜಮೀನಿನಲ್ಲಿ ಸದ್ಯಕ್ಕೆ 96 ಚದರ ಮೀಟರ್‌ಗಳಷ್ಟು ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವರ್ಗಾಯಿಸುವಂತೆ ಕಾರ್ಯಪಾಲಕ ಅಭಿಯಂತರರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರು ಕೋರಿದ್ದು, ಸದರಿ ಕಾಮಗಾರಿಯು ಸಾರ್ವಜನಿಕ ಹಿತಾಸಕ್ತಿಯನ್ನು ಒಳಗೊಂಡಿರುವುದರಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸೇರಿದ ಜಮೀನಿನಲ್ಲಿ 96 ಚದರ ಮೀಟರ್‌ಗಳಷ್ಟು ಜಮೀನನ್ನು ಹೊಸೂರು ರಸ್ತೆ ಅಗಲೀಕರಣ ಕಾರ್ಯಕೈಗೊಳ್ಳಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವರ್ಗಾಯಿಸಲು ಆದೇಶ ನೀಡುವಂತೆ ಪ್ರಸ್ತಾಪಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ. ಮಮಇ 149 ಮಭಾಬ 2010 ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಬೆಂಗಳೂರಿನ ಹೊಸೂರು ರಸ್ತೆಯ ಅಗಲೀಕರಣ ಕಾರ್ಯಕೈಗೊಳ್ಳಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸುಧಾರಣಾ ಸಂಸ್ಥೆಯ ಆವರಣದ ಮುಂದಿನ ಭಾಗದ ಜಮೀನಿನಲ್ಲಿ 96 ಚದರ ಮೀಟರ್‌ಗಳಷ್ಟು ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವರ್ಗಾಯಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರಿಗೆ ಅನುಮತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1269 ಸರ್ಕಾರದ ಅಧೀನ ಕಾರ್ಯದರ್ಶಿ–1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ (ಪರಿಸರ) (ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ), ಸಂಸ್ಥೆಯ ಬಲವರ್ಧನೆ ಮಾಡುವ ಸಲುವಾಗಿ 2011–12ನೇ ಸಾಲಿನಲ್ಲಿ ಹೊಸ ಯೋಜನೆಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಸಂಖ್ಯೆ: EMPRI/CS(fee)/2010/308 ದಿನಾಂಕ 28–10–2010.

**ಪ್ರಸ್ತಾವನೆ :**

ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ 2011–12ನೇ ಸಾಲಿನ ಮುಂದುವರಿದ ವಾರ್ಷಿಕ ಯೋಜನೆಗೆ ಅನ್ವಯವಾಗುವಂತೆ, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಬಲವರ್ಧನೆ ಸಲುವಾಗಿ ಹೊಸ ಯೋಜನೆಯನ್ನು ಪ್ರಾರಂಭಿಸಲು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದೆ.

ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ (ಇಎಂಪಿಆರ್‌ಐ)ಯನ್ನು ರಾಜ್ಯದಲ್ಲಿ ಪರಿಸರ ನಿರ್ವಹಣೆ ವಿಷಯಗಳಲ್ಲಿ ಸಾಮರ್ಥ್ಯ ಹೆಚ್ಚಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು 2002 ರಲ್ಲಿ ಸ್ಥಾಪನೆ ಮಾಡಿರುತ್ತದೆ. ಈ ಸಂಸ್ಥೆಯು ಸ್ವಾಯತ್ತ ಸಂಸ್ಥೆಯಾಗಿದ್ದು, ಸಹಕಾರ ಸಂಘಗಳ ಕಾಯ್ದೆಯಡಿ ನೊಂದಣಿಯಾಗಿರುತ್ತದೆ. ಈ ಸಂಸ್ಥೆಯ ಚಟುವಟಿಕೆಗಳು ಕೆಳಗಿನಂತಿರುತ್ತವೆ.

- ಕೈಗಾರಿಕಾ ಮಾಲಿನ್ಯ ನಿಯಂತ್ರಣ, ಕರಾವಳಿ ಪರಿಸರ ನಿರ್ವಹಣೆ, ಜೀವ ವೈವಿಧ್ಯ ಸಂರಕ್ಷಣೆ ಮತ್ತು ನಿರ್ವಹಣೆ, ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ, ಆಸ್ಪತ್ರೆ ತ್ಯಾಜ್ಯ ವಸ್ತುಗಳ ನಿರ್ವಹಣೆ, ಅಪಾಯಕಾರಿ ತ್ಯಾಜ್ಯ ವಸ್ತುಗಳ ನಿರ್ವಹಣೆ, ಮಳೆ ನೀರಿನ ಕುಯಿಲು, ಎಲೆಕ್ಟ್ರಾನಿಕ್ ತ್ಯಾಜ್ಯ ವಸ್ತುಗಳ ನಿರ್ವಹಣೆ ಹಾಗೂ ಪರಿಸರ ಕಾನೂನು ಮುಂತಾದ ಪ್ರಮುಖ ವಿಷಯಗಳ ಕುರಿತು ತರಬೇತಿ ನೀಡುವುದು.
- ರಾಜ್ಯದಲ್ಲಿ ಪರಿಸರ ಮಾಲಿನ್ಯ ನಿಯಂತ್ರಿಸುವ ನಿಟ್ಟಿನಲ್ಲಿ ವಿವಿಧ ವರ್ಗದ ಕೈಗಾರಿಕಾ ಘಟಕಗಳಿಗೆ ಮತ್ತಿತರ ಸಂಸ್ಥೆಗಳಿಗೆ ಪರಿಸರ ಮಾಲಿನ್ಯ ನಿವಾರಣೆ ಮತ್ತು ಉತ್ತಮ ನಿದರ್ಶನಗಳ ಅಳವಡಿಕೆ ಬಗ್ಗೆ ತರಬೇತಿ ನೀಡುವುದು.
- ಸಂಸ್ಥೆಯು ಪರಿಸರ ವಿಷಯಗಳ ಬಗ್ಗೆ ಅಧ್ಯಯನಗಳನ್ನು ನಡೆಸುತ್ತಿದ್ದು, ಇವುಗಳಲ್ಲಿ ಪರಿಸರ ಕಾರ್ಯಸಾಧ್ಯ ಅಧ್ಯಯನ, ಪರಿಸರ ಮಾಪನ, ಪರಿಸರ ಆಘಾತ ಅಧ್ಯಯನ, ಜೀವ ವೈವಿಧ್ಯ ನಿರ್ವಹಣೆ ವಿಷಯಗಳು ಪ್ರಮುಖವಾಗಿರುತ್ತವೆ. ಕರ್ನಾಟಕ ಜೀವ ವೈವಿಧ್ಯ ಯೋಜನೆಯಡಿ ಸಂಸ್ಥೆಯು ಕರ್ನಾಟಕದ ಮೂರು ಕರಾವಳಿ ಜಿಲ್ಲೆಗಳಲ್ಲಿ ಸಸ್ಯ ವೈವಿಧ್ಯ ಹಾಗೂ ಜಾನುವಾರು ವೈವಿಧ್ಯದ ಬಗ್ಗೆ ಸಮೀಕ್ಷೆ ಹಾಗೂ ಕರ್ನಾಟಕ ಕರಾವಳಿ ಜೀವವೈವಿಧ್ಯ ಮಾಹಿತಿ ವ್ಯವಸ್ಥೆ ಯೋಜನೆಯಡಿ ಜನತಾ ಜೀವ ವೈವಿಧ್ಯ ವಹಿ ತಯಾರಿಕೆ.
- ಕೇಂದ್ರ ಸರ್ಕಾರದ ರಾಷ್ಟ್ರೀಯ ಹಸಿರುಪಡೆ ಕಾರ್ಯಕ್ರಮದಡಿ ಕರ್ನಾಟಕದಾದ್ಯಂತ ಆಯ್ದ ಸರ್ಕಾರಿ ಮತ್ತು ಅನುದಾನಿತ ಪ್ರೌಢಶಾಲೆಗಳಲ್ಲಿ ಹಾಗೂ ಪದವಿ ಪೂರ್ವ ಕಾಲೇಜುಗಳಲ್ಲಿ ಇಕೋ–ಕ್ಲಬ್‌ಗಳನ್ನು ಸ್ಥಾಪಿಸುವುದು. ಶಾಲಾ ಮಕ್ಕಳಲ್ಲಿ ಪರಿಸರ ಬಗ್ಗೆ ಅರಿವು ಮೂಡಿಸುವುದು.

ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯು ಪರಿಸರದ ಸಂರಕ್ಷಣೆಗೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಗಣನೀಯ ಸೇವೆ ಸಲ್ಲಿಸುತ್ತಿದೆ. ಇದೊಂದು ಸೇವಾ ಸಂಸ್ಥೆಯಾಗಿದ್ದು ಸರ್ಕಾರಕ್ಕೆ ಅಗತ್ಯವಿರುವ ಮಾಹಿತಿ ಮತ್ತು ತಾಂತ್ರಿಕ ನೆರವುಗಳನ್ನು ಒದಗಿಸುವ ವ್ಯವಸ್ಥೆ ಮಾಡುತ್ತಿದೆ. ಈ ಸಂಸ್ಥೆಯು ತನ್ನ ಕಾರ್ಯಕ್ರಮಗಳನ್ನು ಕೈಗೊಳ್ಳಲು ಆರ್ಥಿಕ ನೆರವಿನ ಅಗತ್ಯವಿರುತ್ತದೆ. ಸದರಿ ಸಂಸ್ಥೆಯು ಸರ್ಕಾರದ ಪರವಾಗಿ ಕಾರ್ಯನಿರ್ವಹಿಸುತ್ತಿದ್ದು ತನ್ನದೇ ಆದ ಯಾವುದೇ ರೀತಿಯ ಆದಾಯದ ಮೂಲ ಹೊಂದಿಲ್ಲದಿರುವುದರಿಂದ ಸರ್ಕಾರವೇ ಈ ಸಂಸ್ಥೆಗೆ ಅಗತ್ಯವಾದ ಆರ್ಥಿಕ ನೆರವನ್ನು ನೀಡಬೇಕಾಗುತ್ತದೆ. ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯು ತನ್ನ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗಲು ವಾರ್ಷಿಕ ಅನುದಾನವನ್ನು ಬಜೆಟ್‌ನಲ್ಲಿ ಒದಗಿಸುವಂತೆ ಮಹಾನಿರ್ದೇಶಕರು, ಎಂಪ್ರಿರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರ ಪರಿಗಣಿಸಿದ್ದು, ಆರ್ಥಿಕ ಇಲಾಖೆಗೆ ಹಾಗೂ ಯೋಜನಾ ಇಲಾಖೆಯು ಸಹಮತಿಯೊಂದಿಗೆ ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಆಡಳಿತಾತ್ಮಕ ವೆಚ್ಚಗಳನ್ನು ಭರಿಸುವುದಕ್ಕಾಗಿ 2011–12ನೇ ಸಾಲಿನಲ್ಲಿ ಹೊಸ ಯೋಜನೆಯನ್ನು ರೂಪಿಸಿದ್ದು, ಈ ಯೋಜನೆಗೆ ಲೆಕ್ಕಶೀರ್ಷಿಕೆ 3435–03–003–0–15 (ಯೋಜನೆ) ಅಡಿಯಲ್ಲಿ ` 75.00 ಲಕ್ಷಗಳನ್ನು 2011–12ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಮಾಡಿ ಅನುಮೋದನೆ ನೀಡಿದೆ. ಅದರಂತೆ ಹೊಸ ಯೋಜನೆಯನ್ನು ಅನುಮೋದಿಸಲು ನಿರ್ಧರಿಸಲಾಗಿದೆ.

ಈ ಯೋಜನೆಯಡಿಯಲ್ಲಿ ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಅಧಿಕಾರಿ/ಸಿಬ್ಬಂದಿಗಳ ವೇತನ ಮತ್ತಿತರ ವೆಚ್ಚಗಳ ಪಾವತಿ, ಸಂಸ್ಥೆಯ ಆಡಳಿತ ನಿರ್ವಹಣಾ ವೆಚ್ಚಗಳು, ಸಂಸ್ಥೆ ವತಿಯಿಂದ ಹಮ್ಮಿಕೊಳ್ಳುವ ತರಬೇತಿ/ಸಂಶೋಧನಾ ವೆಚ್ಚಗಳು, ಅಗತ್ಯ ಅನುಮೋದನೆಗಳೊಡನೆ ಕೈಗೊಳ್ಳುವ ಸಂಸ್ಥೆಯ ಕಾರ್ಯನಿರ್ವಹಣೆಗೆ ಅಗತ್ಯವೆನಿಸುವ ಇತರೆ ಕಾರ್ಯಕ್ರಮಗಳ ವೆಚ್ಚಗಳನ್ನು ಭರಿಸಬಹುದಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ. ಅಪಜೀ 145 ಇಪಿಸಿ 2010 ಬೆಂಗಳೂರು, ದಿನಾಂಕ. 21.4.2011**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ "ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಬಲವರ್ಧನೆ" ಎಂಬ ಹೊಸ ಯೋಜನೆಯ ಅನುಷ್ಠಾನಕ್ಕೆ ಮಂಜೂರಾತಿ ನೀಡಲಾಗಿದೆ. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಾದ ವೆಚ್ಚವನ್ನು ಲೆಕ್ಕಶೀರ್ಷಿಕೆ 3435–03–003–0–15 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಯೋಜನೆಯಡಿಯಲ್ಲಿ ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆಯ ಅಧಿಕಾರಿ/ಸಿಬ್ಬಂದಿಗಳ ವೇತನ ಮತ್ತಿತರ ವೆಚ್ಚಗಳ ಪಾವತಿ, ಸಂಸ್ಥೆಯ ಆಡಳಿತ ನಿರ್ವಹಣಾ ವೆಚ್ಚಗಳು, ಸಂಸ್ಥೆ ವತಿಯಿಂದ ಹಮ್ಮಿಕೊಳ್ಳುವ ತರಬೇತಿ/ಸಂಶೋಧನಾ ವೆಚ್ಚಗಳು ಅಗತ್ಯ ಅನುಮೋದನೆಗಳೊಡನೆ ಕೈಗೊಳ್ಳುವ ಸಂಸ್ಥೆಯು ಕಾರ್ಯನಿರ್ವಹಣೆಗೆ ಅಗತ್ಯವೆನಿಸುವ ಇತರೆ ಕಾರ್ಯಕ್ರಮಗಳ ವೆಚ್ಚಗಳನ್ನು ಭರಿಸತಕ್ಕದ್ದು.

ಈ ಆದೇಶವನ್ನು ಯೋಜನೆ ಇಲಾಖೆಯ ಟಿಪ್ಪಣೆ ಸಂಖ್ಯೆ. ಪಿಡಿ 57 ಪಿಎಫ್ಒ 2010 ದಿನಾಂಕ 30–12–2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಆಇ–07–ವೆಚ್ಚ–5 2011 ದಿನಾಂಕ 4–2–2011 ರಲ್ಲಿನ ಸಹಮತಿಯಂತೆ ಹಾಗೂ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜನೆ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996ರಂತೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಮನೋಹರ್**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1270

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕಾಡು ಪ್ರಾಣಿಗಳ ಹಾವಳಿಯಿಂದ ಬೆಳೆನಾಶ, ಮಾನವನ ಪ್ರಾಣಹಾನಿ, ಶಾಶ್ವತ ಅಂಗವಿಕಲತೆ, ಸಾಕುಪ್ರಾಣಿಗಳ ಪ್ರಾಣಹಾನಿ, ಆಸ್ತಿಪಾಸ್ತಿ ಹಾನಿ ಹಾಗೂ ಗಾಯಗೊಂಡವರಿಗೆ ನೀಡಲಾಗುತ್ತಿರುವ ಪರಿಹಾರದ ಮೊತ್ತ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂಖ್ಯೆ: ಅಪಜೀ 52 ಎಫ್‌ಡಬ್ಲ್ಯುಎಲ್ 96, ದಿನಾಂಕ: 12–02–2002.
2. ಸರ್ಕಾರದ ಆದೇಶದ ಸಂಖ್ಯೆ: ಅಪಜೀ 259 ಎಫ್‌ಡಬ್ಲ್ಯುಎಲ್ 2006, ದಿನಾಂಕ: 17–01–2007.
3. ಸರ್ಕಾರದ ತಿದ್ದುಪಡಿ ಸಂಖ್ಯೆ: ಅಪಜೀ 162 ಎಫ್‌ಡಬ್ಲ್ಯುಎಲ್ 2008, ದಿನಾಂಕ: 05.06.2009.
4. ಸರ್ಕಾರದ ಆದೇಶದ ಸಂಖ್ಯೆ: ಅಪಜೀ 70 ಎಫ್‌ಡಬ್ಲ್ಯುಎಲ್ 2009, ದಿನಾಂಕ: 10–08–2010.
5. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ2/ವಜೀ/ಸಿಆರ್–40/2010–11, ದಿನಾಂಕ: 13.12.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 12.02.2002 ರ ಸರ್ಕಾರಿ ಆದೇಶದಲ್ಲಿ ವನ್ಯಪ್ರಾಣಿಗಳಿಂದ ಬೆಳೆ ನಾಶ, ಮಾನವ ಪ್ರಾಣ ಹಾನಿ, ಸಾಕು ಪ್ರಾಣಿಗಳ ಪ್ರಾಣ ಹಾನಿ, ಶಾಶ್ವತ ಅಂಗವಿಕಲತೆ, ಗಾಯಗೊಂಡ ಹಾಗೂ ಆಸ್ತಿಪಾಸ್ತಿ ನಷ್ಟ ಪ್ರಕರಣಗಳಿಗೆ ಸಂಬಂಧಿಸಿದಂತೆ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ಮೃತರ ವಾರಸುದಾರರಿಗೆ ರೂ.1.00 ಲಕ್ಷಗಳ ದಯಾತ್ಮಕ ಧನವನ್ನು ನೀಡುವ ಕುರಿತು ಹಾಗೂ ಪರಿಹಾರ ವಿತರಿಸಲು ಅರಣ್ಯ ಇಲಾಖೆಯ ಕ್ಷೇತ್ರಾಧಿಕಾರಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಿ ಮಂಜೂರಾತಿ ಆದೇಶ ನೀಡಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ: 17.01.2007 ರ ಸರ್ಕಾರಿ ಆದೇಶದಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆ ನಾಶ, ಮಾನವ ಪ್ರಾಣ ಹಾನಿ, ಸಾಕು ಪ್ರಾಣಿಗಳ ಪ್ರಾಣಹಾನಿ, ಶಾಶ್ವತ ಅಂಗವಿಕಲತೆ, ಗಾಯಗೊಂಡ ಹಾಗೂ ಆಸ್ತಿ ನಷ್ಟ ಪ್ರಕರಣಗಳಿಗೆ ಸಂಬಂಧಿಸಿದಂತೆ

ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ಮೃತರ ವಾರಸುದಾರರಿಗೆ ರೂ.1.50 ಲಕ್ಷಗಳ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.

3. ಮೇಲೆ (3) ರಲ್ಲಿ ಓದಲಾದ ದಿನಾಂಕ: 05.06.2009 ರ ತಿದ್ದುಪಡಿ ಆದೇಶದಲ್ಲಿ ರೂ.5,800-00ರ ವರೆಗಿನ ಮೊತ್ತದ ಬೆಳೆನಾಶಕ್ಕೆ ಭೂ ಮಾಲೀಕರಿಗೆ ಗರಿಷ್ಟ ಮೊತ್ತವನ್ನು ರೂ.45,000-00 ಗಳಿಗೆ ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ.

4. ಮೇಲೆ (4) ರಲ್ಲಿ ಓದಲಾದ ದಿನಾಂಕ: 10.08.2010 ರ ಆದೇಶದಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ಮೃತರ ವಾರಸುದಾರರಿಗೆ ಪಾವತಿಸಲಾಗುತ್ತಿರುವ ದಯಾತ್ಮಕ ಧನದ ಮೊತ್ತವನ್ನು ರೂ.2.00 ಲಕ್ಷಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

5. ಮೇಲೆ (5) ರಲ್ಲಿ ಓದಲಾದ ದಿನಾಂಕ: 13.12.2010 ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ) ಇವರು ದಿನಾಂಕ: 10.12.2010 ರಂದು ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ರಾಜ್ಯದಲ್ಲಿ ಮಾನವ - ವನ್ಯಪ್ರಾಣಿ ಸಂಘರ್ಷದ ಬಗ್ಗೆ ಚರ್ಚಿಸಿ ತೆಗೆದುಕೊಂಡ ನಿರ್ಣಯದನುಸಾರ ಪರಿಹಾರ ಧನ ಹೆಚ್ಚಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

6. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಈ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಪಡಿಸಿ ಒಂದೇ ಸರ್ಕಾರಿ ಆದೇಶ ಹೊರಡಿಸಬೇಕಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 143 ಎಫ್‌ಡಬ್ಲ್ಯುಎಲ್ 2010, ಬೆಂಗಳೂರು, ದಿನಾಂಕ: 30/04/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆ ನಾಶ, ಮಾನವ ಪ್ರಾಣಹಾನಿ, ಸಾಕು ಪ್ರಾಣಿಗಳ ಪ್ರಾಣ ಹಾನಿ, ಶಾಶ್ವತ ಅಂಗವಿಕಲತೆ, ಗಾಯಗೊಂಡವರಿಗೆ ಹಾಗೂ ಆಸ್ತಿಪಾಸ್ತಿ ನಷ್ಟಕ್ಕೆ ಸಂಬಂಧಿಸಿದಂತೆ ಈ ಕೆಳಗಿನಂತೆ ಪರಿಹಾರ ಮೊತ್ತವನ್ನು ನಿಗದಿಪಡಿಸಿ ವಿತರಿಸಲು ಅರಣ್ಯ ಇಲಾಖೆಯ ಕ್ಷೇತ್ರ ಅಧಿಕಾರಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಿ ಮಂಜೂರಾತಿ ನೀಡಲಾಗಿದೆ. ಈ ಆದೇಶವು ತಕ್ಷಣದಿಂದಲೇ ಹಾಗೂ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**I) ಕಾಡು ಪ್ರಾಣಿಗಳಿಂದ ಉಂಟಾದ ಬೆಳೆನಾಶಕ್ಕೆ ಸಂಬಂಧಿಸಿದ ಮಾಲೀಕರಿಗೆ ಮಂಜೂರು ಮಾಡುವ ಪರಿಹಾರ:-**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ವನ್ಯಪ್ರಾಣಿಗಳಿಂದ ಉಂಟಾಗುವ ಬೆಳೆ ಹಾನಿ | (ಅ) ರೂ.7,500/-ಗಳವರೆಗಿನ ಮೊತ್ತದ ಬೆಳೆ ನಾಶಕ್ಕೆ ಭೂ ಮಾಲೀಕರಿಗೆ ಮಂಜೂರು ಮಾಡುವ ದಯಾತ್ಮಕ ಧನ ಬೆಳೆ ನಾಶದ ಪೂರ್ಣ ಮೊತ್ತ | ಪ್ರತಿ ವರ್ಷದಲ್ಲಿ ರೂ.1.00 ಲಕ್ಷಗಳ ವರೆಗಿನ ಬೆಳೆ ನಾಶಕ್ಕೆ ಪರಿಹಾರ ನಿಗದಿಪಡಿಸಿ ಮಂಜೂರು ಮಾಡುವ ಅಧಿಕಾರವನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಹಾಗೂ ರೂ.1.00 ಲಕ್ಷಗಳಿಗಿಂತ ಹೆಚ್ಚಿನ ಬೆಳೆನಾಶಕ್ಕೆ ಮೌಲ್ಯಮಾಪನ ಮಾಡಿ ಪರಿಹಾರ ಧನ ನಿಗದಿಪಡಿಸಿ ಪಾವತಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ/ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ/ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದೆ. | ಪ್ರತಿ ಪ್ರಕರಣಕ್ಕೆ ಗರಿಷ್ಟ ಮೊತ್ತ ರೂ.7,500/-ಗಳು |
| | | (ಆ) ರೂ.7,500/- ಗಳಿಗೆ ಮೇಲ್ಪಟ್ಟ ಹಾಗೂ ರೂ.35,000/- ಗಳವರೆಗಿನ ಮೊತ್ತದ ಬೆಳೆ ನಾಶಕ್ಕೆ ಶೇಕಡ 50 ರಷ್ಟು ಪರಿಹಾರ ಧನ ಕನಿಷ್ಟ ರೂ.7,500/- ಮತ್ತು ಗರಿಷ್ಟ ರೂ.21,250/-<br><br>(ಇ) ರೂ.35,000/- ಗಳಿಗೆ ಮೇಲ್ಪಟ್ಟ ಬೆಳೆನಾಶಕ್ಕೆ ಶೇಕಡ 30 ರಷ್ಟು ಪರಿಹಾರ, ಕನಿಷ್ಟ ರೂ.21,250/- ಮತ್ತು ಗರಿಷ್ಟ ರೂ.50,000/- ಗಳು | ಪ್ರತಿ ವರ್ಷಕ್ಕೆ ರೂ.1.00 ಲಕ್ಷಗಳ ವರೆಗಿನ ಬೆಳೆ ನಾಶಕ್ಕೆ ಪರಿಹಾರ ನಿಗದಿಪಡಿಸಿ ಮಂಜೂರು ಮಾಡುವ ಅಧಿಕಾರವನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಹಾಗೂ ರೂ.1.00 ಲಕ್ಷಗಳಿಗಿಂತ ಹೆಚ್ಚಿನ ಬೆಳೆನಾಶಕ್ಕೆ ಮೌಲ್ಯಮಾಪನ ಮಾಡಿ ಪರಿಹಾರ ಧನ ನಿಗದಿಪಡಿಸಿ ಪಾವತಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ/ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ/ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದೆ.<br>ಕ್ಷೇತ್ರ ವ್ಯಾಪ್ತಿಯ ಅರಣ್ಯ ಸಂರಕ್ಷಣಾಧಿಕಾರಿ/ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ | ಪ್ರತಿ ಪ್ರಕರಣಕ್ಕೆ ಗರಿಷ್ಟ ರೂ. 21,250/-ಗಳು<br><br>ಪ್ರತಿ ಪ್ರಕರಣಕ್ಕೆ ಕನಿಷ್ಟ ರೂ.21,250/- ಮತ್ತು ಗರಿಷ್ಟ ಮೊತ್ತ ರೂ.50,000/- ಗಳು |

**ಷರತ್ತು:** ಮೇಲಿನ ಪ್ರಕರಣಗಳಲ್ಲಿ ಒತ್ತುವರಿಗೊಂಡ ಅರಣ್ಯ ಭೂಮಿಯಲ್ಲಿ ಬೆಳೆಯಲಾದ ಬೆಳೆಗಳು ಕಾಡು ಪ್ರಾಣಿಗಳಿಂದ ಹಾನಿಗೊಂಡಲ್ಲಿ ಅಂಥ ಬೆಳೆ ನಷ್ಟಕ್ಕೆ ಪರಿಹಾರ ಧನ ನೀಡಲಾಗುವುದಿಲ್ಲ.

**II) ಕಾಡು ಪ್ರಾಣಿಗಳಿಂದ ದನಕರುಗಳ ಪ್ರಾಣ ಹಾನಿಯಾದ ಪ್ರಕರಣಗಳಿಗೆ ಮಂಜೂರು ಮಾಡಬಹುದಾದ ಪರಿಹಾರ ಧನ:–**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ ಧನ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ನಿಷೇಧಿಸಲ್ಪಟ್ಟ ಮೇವು ಪ್ರದೇಶಗಳನ್ನು ಹೊರತು ಪಡಿಸಿ ಉಳಿದ ಪ್ರದೇಶಗಳಲ್ಲಿ ವನ್ಯಜೀವಿಗಳಿಂದ ಹತ್ಯೆಯಾದ ಸಾಕು ಪ್ರಾಣಿಗಳ ವಾರಸುದಾರರಿಗೆ ಮಂಜೂರು ಮಾಡುವ ಪರಿಹಾರ ಧನ | ಪ್ರತಿ ಪ್ರಾಣಿಯ ಹತ್ಯೆಗೆ ಕನಿಷ್ಟ ಮೊತ್ತ ರೂ.2,500/– ಗರಿಷ್ಟ 3,000/–ಗಳು | ಕ್ಷೇತ್ರ ವ್ಯಾಪ್ತಿಯ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ ಅರಣ್ಯ ಸಂರಕ್ಷಣಾಧಿಕಾರಿ/ ಉಪ ಅರಣ್ಯ ಸಂರಕ್ಷಣಾಧಿಕಾರಿ. | ಪ್ರತಿ ಸಾಕು ಪ್ರಾಣಿಯ ಹತ್ಯೆಗೆ ಕನಿಷ್ಟ ರೂ.2,500/– ಹಾಗೂ ಗರಿಷ್ಟ ರೂ.3,000/– |

**III) ಕಾಡು ಪ್ರಾಣಿಗಳಿಂದ ಮಾನವ ಪ್ರಾಣ ಹಾನಿ ಪ್ರಕರಣಗಳಿಗೆ ಮಂಜೂರಾತಿ ಮಾಡುವ ಪರಿಹಾರ ಧನ:–**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ ಧನ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ವನ್ಯಪ್ರಾಣಿಯಿಂದ ಹತ್ಯೆಯಾದ ವ್ಯಕ್ತಿಯು ಅರಣ್ಯ ಪ್ರದೇಶಗಳಲ್ಲಿ ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿಲ್ಲವೆಂದು ಹಾಗೂ ಮರಣೋತ್ತರ ಪರೀಕ್ಷೆಯ ವರದಿಯಲ್ಲಿ ಸದರಿ ವ್ಯಕ್ತಿಯು ವನ್ಯ ಮೃಗಗಳಿಂದ ಮೃತನಾಗಿದ್ದಾನೆಂದು ದೃಢಪಟ್ಟಿದ್ದರೆ, ಸತ್ತ ವ್ಯಕ್ತಿಯ ವಾರಸುದಾರರಿಗೆ ಮಂಜೂರು ಮಾಡುವ ಪರಿಹಾರ ಧನ | ರೂ.3.50 ಲಕ್ಷಗಳು (ಮೂರು ಲಕ್ಷದ ಐವತ್ತು ಸಾವಿರಗಳು ಮಾತ್ರ) | ಕ್ಷೇತ್ರ ವ್ಯಾಪ್ತಿಯ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ ಅರಣ್ಯ ಸಂರಕ್ಷಣಾಧಿಕಾರಿ / ಉಪ ಅರಣ್ಯ ಸಂರಕ್ಷಣಾಧಿಕಾರಿ. | ಮೃತಪಟ್ಟ ಪ್ರತಿ ವ್ಯಕ್ತಿಗೆ ರೂ.3.50 ಲಕ್ಷಗಳು (ರೂಪಾಯಿ ಮೂರು ಲಕ್ಷದ ಐವತ್ತು ಸಾವಿರಗಳು ಮಾತ್ರ) |

**IV) ಕಾಡು ಪ್ರಾಣಿಗಳಿಂದ ಶಾಶ್ವತ ಅಂಗವಿಕಲತೆಯಾದ ಪ್ರಕರಣಗಳಿಗೆ ಮಂಜೂರು ಮಾಡುವ ಪರಿಹಾರ ಧನ:–**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ ಧನ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ವನ್ಯಪ್ರಾಣಿಯಿಂದ ಶಾಶ್ವತ ಅಂಗವಿಕಲತೆಗೆ ಒಳಗಾಗುವ ವ್ಯಕ್ತಿಯು ಅರಣ್ಯ ಪ್ರದೇಶಗಳಲ್ಲಿ ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿಲ್ಲವೆಂದೂ, ಮತ್ತು ಜಿಲ್ಲಾ ಶಸ್ತ್ರ ಚಿಕಿತ್ಸೆ ತಜ್ಞರು ಅಥವಾ ಜಿಲ್ಲಾ ವೈದ್ಯಕೀಯ ಅಧಿಕಾರಿ ಮಟ್ಟದ ವೈದ್ಯರಿಂದ ಪಡೆದ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ವನ್ಯಪ್ರಾಣಿಯಿಂದ ಶಾಶ್ವತವಾಗಿ ಅಂಗವಿಕಲತೆ (permanent disability) ಉಂಟಾಗಿದೆ ಎಂದು ದೃಢೀಕರಿಸಿದ ವ್ಯಕ್ತಿಗೆ ಮಂಜೂರು ಮಾಡುವ ಪರಿಹಾರ ಧನ | ಪ್ರತಿಯೊಬ್ಬ ಊನಗೊಂಡಿರುವ ವ್ಯಕ್ತಿಗೆ ಗರಿಷ್ಟ ಮೊತ್ತ ರೂ.50,000/–(ರೂಪಾಯಿ ಐವತ್ತು ಸಾವಿರಗಳು) | ಕ್ಷೇತ್ರ ವ್ಯಾಪ್ತಿಯ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ ಅರಣ್ಯ ಸಂರಕ್ಷಣಾಧಿಕಾರಿ / ಉಪ ಅರಣ್ಯ ಸಂರಕ್ಷಣಾಧಿಕಾರಿ. | ಪ್ರತಿಯೊಬ್ಬ ಊನಗೊಂಡಿರುವ ವ್ಯಕ್ತಿಗೆ ಗರಿಷ್ಟ ಮೊತ್ತ ರೂ.50,000/– (ರೂಪಾಯಿ ಐವತ್ತು ಸಾವಿರಗಳು) |

**V) ಕಾಡು ಪ್ರಾಣಿಗಳಿಂದ ಗಾಯಗೊಂಡವರಿಗೆ ಮಂಜೂರು ಮಾಡುವ ಪರಿಹಾರ ಧನ:-**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ ಧನ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ವನ್ಯಪ್ರಾಣಿಯಿಂದ ಗಾಯಗೊಳ್ಳುವಾಗ ವ್ಯಕ್ತಿಯು ಅರಣ್ಯ ಪ್ರದೇಶದಲ್ಲಿ ಕಾನೂನು ಬಾಹಿರ ಚಟುವಟಿಕೆಯಲ್ಲಿ ನಿರತನಾಗಿರದೇ ಇದ್ದು ಹಾಗೂ ವೈದ್ಯಕೀಯ ಅಧಿಕಾರಿಯಿಂದ ಗಾಯಗೊಂಡ ವ್ಯಕ್ತಿಯು ಶುಶ್ರೂಷೆ ಪಡೆದ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಗಾಯಗೊಂಡ ವ್ಯಕ್ತಿಗೆ ಮಂಜೂರು ಮಾಡುವ ಪರಿಹಾರ ಧನ | ಗಾಯಗೊಂಡ ಪ್ರತಿ ವ್ಯಕ್ತಿಗೆ ಗರಿಷ್ಟ ಮೊತ್ತ ರೂ.20,000/-ಗಳು (ರೂಪಾಯಿ ಇಪ್ಪತ್ತು ಸಾವಿರಗಳು ಮಾತ್ರ) | ಅ)ಕ್ಷೇತ್ರ ವ್ಯಾಪ್ತಿಯ ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸ್ವತಂತ್ರವಾಗಿ ಕೆಲಸ ನಿರ್ವಹಿಸುತ್ತಿರುವ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ.<br><br>ಆ)ಕ್ಷೇತ್ರ ವ್ಯಾಪ್ತಿಯ ಅರಣ್ಯ ಸಂರಕ್ಷಣಾಧಿಕಾರಿ/ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ. | ಅ) ಗಾಯಗೊಂಡ ಪ್ರತಿ ವ್ಯಕ್ತಿಗೆ ರೂ.5,000/- (ರೂಪಾಯಿ ಐದು ಸಾವಿರ ಮಾತ್ರ)<br><br>ಆ) ಪ್ರತಿ ಪ್ರಕರಣಕ್ಕೆ ಗರಿಷ್ಟ ರೂ.20,000/- ಗಳು (ರೂಪಾಯಿ ಇಪ್ಪತ್ತು ಸಾವಿರಗಳು ಮಾತ್ರ) |

**VI) ಕಾಡಾನೆಗಳ ದಾಳಿಯಿಂದ ಉಂಟಾದ ಆಸ್ತಿ ನಷ್ಟಕ್ಕೆ ಮಂಜೂರು ಮಾಡುವ ಪರಿಹಾರ ಧನ:-**

| ಕ್ರ. ಸಂ. | ವಿವರಗಳು | ವಿತರಿಸಲಾಗುವ ಪರಿಹಾರ ಧನ | ಮಂಜೂರಾತಿ ಪ್ರಾಧಿಕಾರ | |
|---|---|---|---|---|
| | | | ಹೆಸರು | ಮೊತ್ತ |
| 1. | ಕಾಡಾನೆಗಳ ಹಾವಳಿಯಿಂದ ನಷ್ಟಕ್ಕೊಳಗಾದ ಆಸ್ತಿ ಅಂದರೆ ಮನೆಗಳು, ಶೆಡ್ಡುಗಳು, ಪಂಪ್‌ಹೌಸ್‌ಗಳು, ಪೈಪ್‌ಲೈನ್‌ಗಳು, ಬೇಲಿಗಳು ಇತ್ಯಾದಿ ಕಳೆದುಕೊಂಡ ವಾರಸುದಾರರಿಗೆ ಮಂಜೂರು ಮಾಡುವ ಪರಿಹಾರ ಧನ | ಪ್ರತಿ ಪ್ರಕರಣಕ್ಕೆ ರೂ.7,000/- (ರೂಪಾಯಿ ಏಳು ಸಾವಿರಗಳು ಮಾತ್ರ) ಗಳ ಗರಿಷ್ಟ ಮೊತ್ತ | ಕ್ಷೇತ್ರ ವ್ಯಾಪ್ತಿಯ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ ಅರಣ್ಯ ಸಂರಕ್ಷಣಾಧಿಕಾರಿ /ಉಪ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸ್ವತಂತ್ರವಾಗಿ ಕೆಲಸ ನಿರ್ವಹಿಸುತ್ತಿರುವ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ. | ಪ್ರತಿ ಪ್ರಕರಣಕ್ಕೆ ರೂ.7,000/- (ರೂಪಾಯಿ ಏಳು ಸಾವಿರಗಳು ಮಾತ್ರ) ಗಳ ಗರಿಷ್ಟ ಮೊತ್ತ |

2. ಈ ಆದೇಶವನ್ನು ಈ ಕೆಳಕಂಡ ಷರತ್ತುಗಳಿಗನುಗುಣವಾಗಿ ಹೊರಡಿಸಲಾಗಿದೆ:-

1. ಒತ್ತುವರಿಗೊಂಡ ಅರಣ್ಯ ಭೂಮಿಯಲ್ಲಿರುವ ಆಸ್ತಿಯು ವನ್ಯಪ್ರಾಣಿಯಿಂದ ನಷ್ಟವಾದಲ್ಲಿ ಅಂಥ ಆಸ್ತಿಯ ನಷ್ಟಕ್ಕೆ ಪರಿಹಾರ ನೀಡಲಾಗುವುದಿಲ್ಲ.
2. ಮಾನವ ಪ್ರಾಣ ಹಾನಿಗೆ ನಿಗದಿಪಡಿಸಲಾದ ಪರಿಹಾರ ಧನದ ಮೊತ್ತ ರೂ.3.50 ಲಕ್ಷಗಳಲ್ಲಿ ರೂ.1.50 ಲಕ್ಷಗಳನ್ನು ಘಟನೆ ನಡೆದ ತಕ್ಷಣವೇ ವಾರಸುದಾರರಿಗೆ ಪಾವತಿಸತಕ್ಕದ್ದು, ಹಾಗೂ ಉಳಿದ ಮೊತ್ತವನ್ನು ಕ್ಷೇತ್ರ ವ್ಯಾಪ್ತಿಯ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹಂತದಲ್ಲಿ ಅಥವಾ ಅದಕ್ಕಿಂತ ಮೇಲ್ಪಟ್ಟ ಅಧಿಕಾರಿಗಳಿಂದ ವಿಚಾರಣೆ ನಡೆಸಿ ವಾರಸುದಾರರಿಗೆ ಪಾವತಿಸತಕ್ಕದ್ದು.
3. ವನ್ಯಪ್ರಾಣಿಯಿಂದ ಉಂಟಾದ ಪ್ರಾಣಹಾನಿ ಪ್ರಕರಣಗಳಿಗೆ ಅನುದಾನ ಲಭ್ಯತೆಯನ್ನಾಧರಿಸಿ ಪರಿಹಾರಧನವನ್ನು ವಿತರಿಸಲಾಗುವುದು.
4. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವನ್ಯಜೀವಿ) ಇವರು ಎಲ್ಲಾ ಪ್ರಕರಣಗಳಲ್ಲಿ ಪರಿಹಾರ ಧನದ ವಿತರಣೆಯ ಆಡಳಿತವನ್ನು ನಿಭಾಯಿಸುವುದು.
5. ವನ್ಯಜೀವಿಗಳಿಂದ ಶಾಶ್ವತ ಅಂಗವಿಕಲತೆಗೊಳಗಾಗುವ ವ್ಯಕ್ತಿಗೆ ವೈದ್ಯಕೀಯ ಖರ್ಚುಗಳ ಜೊತೆಗೆ ಪರಿಹಾರ ಧನವನ್ನು ನೀಡುವ ಅವಕಾಶವಿರುತ್ತದೆ.
6. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು; ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು: ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು; ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಹಾರ ಮೊತ್ತವು ಹೆಚ್ಚಿರುವ ಪ್ರಕರಣಗಳಲ್ಲಿ ಪರಿಹಾರ ಧನ ವಿತರಿಸುವ ಸಂದರ್ಭದಲ್ಲಿ ಸಂಬಂಧಿಸಿದ ಕ್ಷೇತ್ರ ವ್ಯಾಪ್ತಿಯ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ/ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಸ್ಥಳ ತಪಾಸಣೆ ಮಾಡಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 143/ವೆಚ್ಚ-5/2010 ದಿನಾಂಕ: 11-04-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1271

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## Forest, Ecology and Environment Secretariat

**Corrigendum**

**No. FEE 50 FGL 2011, Bangalore, Dated: 21/4/2011**

In condition No. 5 of the order portion of the Government Order No. FEE 213 FGL 2000, dated: 30.01.2003 for the words "The user agency shall pay the cost of raising Compensatory Afforestation over double the area in degraded forest area at the rate prevailing at the time of approval" shall be read as "The Compensatory Afforestation shall be raised over 1.39 ha. of identified non-forest land at the cost of User agency".

By order and in the name of the Governor of Karnataka,

P.R. 1272

**H.M. MALLIKARJUNA SWAMY**

Under Secretary to Government,

Forest, Ecology and Environment Department

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಮಮಇ 206 ಮಭಾಬ 2010 ಬೆಂಗಳೂರು, ದಿನಾಂಕ: 28.03.2011**

ಆದೇಶ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ: 13.10.2010ರ ಅನುಬಂಧ–1ರ ಷರತ್ತುಗಳಡಿ ಸದಸ್ಯರು ಪಾಲಿಸಬೇಕಾದ ನಡವಳಿಕೆಗಳು ಎಂಬ ಶೀರ್ಷಿಕೆಯಡಿ 2ನೇ ಅಂಶದಲ್ಲಿ "ಸಿಟ್ಟಿಂಗ್ ಸಂದರ್ಭದ ಹೊರತುಪಡಿಸಿ ಬೇರೆ ಸಮಯದಲ್ಲಿ ಅಧೀಕ್ಷಕರ ಅನುಮತಿ ಇಲ್ಲದೆ ಸಂಸ್ಥೆಗಳಿಗೆ ಭೇಟಿ ನೀಡತಕ್ಕದ್ದಲ್ಲ" ಎಂಬುದನ್ನು "ಸಿಟ್ಟಿಂಗ್ ಸಂದರ್ಭವನ್ನು ಹೊರತುಪಡಿಸಿ ಬೇರೆ ಸಮಯದಲ್ಲಿ ಅಧೀಕ್ಷಕರ ಗಮನಕ್ಕೆ ತಂದು ಸಂಸ್ಥೆಗಳಿಗೆ ಭೇಟಿ ನೀಡತಕ್ಕದ್ದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1273

ಸರ್ಕಾರದ ಅಧೀನ ಕಾರ್ಯದರ್ಶಿ–1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

Sub : Extensio of contract for External Evaluation of Citizen Help Desk-reg.

**Preamble :**

As per the Project implementation Plan, external evaluation of Citizen Help Desk (CHD) is one of the innovative schemes which empowers the public with information and provide guidance of health in Government Hospitals. It is enhancing the efficiency of the staff by counselling, confidence building and redressing their grievances.

**The scope of the services are as follows**

* To improve services at the Government hospitals by education of staff and public about facilities and services available: monitoring the quality of Health care. Ex: time taken by doctor to attend a patient, availability of free drugs etc., timely feedback to the concerned authorities regarding health care delivery in Government hospitals
* To enhance transparency and accountability in the delivery of services through the Help Desks which will give regular feedback and other support.
* To empower the public with information from Help Desk and provide guidance through posters, leaflets and boards etc.
* Enhance the efficiency of the service provision by staff by a strategy of counselling, confidence building and motivation.
* Establish a link between service providers and users through regular feedback mechanism.
* Conduct of regular interaction camps in the areas inhabited by poor to build confidence amongst the poor to access services at Public hospitals.

It was decided to have a third party evaluation and the consent of World Bank was also obtained. An expression of Interest was published as per regulations. 13 proposals were received and the evaluation committee has selected M/s. MA FOI CONSULTING SOLUTIONS LIMITED, Bangalore, as the eligible institution for the purpose.

The contract was awarded to M/s. MA FOI CONSULTING SOLUTIONS LIMITED, Bangalore vide G.O. No. KHSDRP/PPP/CHD/05/2010-11, dt: 02.11.2010. The Deputy Director (SICF) has requested to extend the contract from 03.11.2010 to 15.04.2011. The proposal has been examined in detail.

Hence the following order

**Govt. Order No. KHSDRP/PPP/CHD/05/2010-11, Bangalore, Dated: 26.04.2011**

Under the circumstances mentioned in the preamble, approval is accorded to extend the contract from 03.11.2010 to 15.04.2011 for M/s. Ma Foi Consulting Solutions Limited, Bangalore, to carry-out the external evaluation of Citizen Help Desks in 18 hospitals in 18 Districts. The ToR, terms and conditions of the contract agreements remaining the same. There shall be no extra cost/financial burden on the project during the extended period.

By order and in the name of the Governor of Karnataka,
**M. SHASHIDHAR**
Deputy Secretary to Govt.
KHSDRP
Health and Family Welfare Department

**P.R. 1274**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಸಾಗರ ಪಟ್ಟಣಕ್ಕೆ ಶರಾವತಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಲಿಂಗನಮಕ್ಕಿ ರಿಸರ್‌ವಾಯರ್ ಹಿನ್ನೀರಿನಿಂದ ನೀರು ಸರಬರಾಜು ಮಾಡುವ ಯೋಜನೆಯ ಮಾರ್ಗ ಮಧ್ಯದಲ್ಲಿ ಬರುವ ಹಳ್ಳಿಗಳಿಗೆ ನೀರು ಸರಬರಾಜು ಮಾಡುವ ಅಂದಾಜು ವೆಚ್ಚ ರೂ.5486.00 ಲಕ್ಷಗಳಿಗೆ ತಾತ್ವಿಕವಾಗಿ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ:ನಅಇ 42 ಯುಡಬ್ಲ್ಯೂಎಸ್ 2007, ದಿನಾಂಕ:2/9/2008.

**2.** ವ್ಯ.ನಿ., ಕನನೀಸ ಒಚಮಂಡಳಿ, ರವರ ಪತ್ರ ಸಂಖ್ಯೆ:ಕಜಮ/ತಾಂತ್ರಿಕ/ಉಮುಅ–(ಇ)/ತಾಂಸ–9/ಸಾಗರ–ನಿ.ಸ.ಯೋ/1998/2008–09, ದಿನಾಂಕ 22.09.08.

**ಪ್ರಸ್ತಾವನೆ :**

ಸಾಗರ ಪಟ್ಟಣಕ್ಕೆ ಶರಾವತಿ ನದಿಯ ಹಿನ್ನೀರಿನಿಂದ ನೀರು ಸರಬರಾಜು ಮಾಡುವ ಯೋಜನೆಗೆ ಅಂದಾಜು ರೂ.4000.00ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಕೆಲವು ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು. ಸದರಿ ಯೋಜನೆಯ ಮಾರ್ಗಮಧ್ಯದಲ್ಲಿ ಬರುವ 14 ಹಳ್ಳಿಗಳಿಗೆ ನೀರು ಸರಬರಾಜು ಮಾಡುವ ಪ್ರಸ್ತಾವನೆಯನ್ನು ದಿನಾಂಕ:10–9–2008ರಂದು ನಡೆದ ಸಚಿವ ಸಂಪುಟದ ಸಭೆಯು ಈ ಕೆಳಕಂಡಂತೆ ನಿರ್ಣಯಿಸಿ ಆದೇಶಿಸಿರುತ್ತದೆ.

**"ಮುಂದುವರಿದು, ಸಾಗರ ಪಟ್ಟಣಕ್ಕೆ ನೀರು ಸರಬರಾಜು ಮಾಡುವ ಯೋಜನೆ ಕುರಿತು ಮಾರ್ಗ ಮಧ್ಯೆ ಬರುವ ಹಳ್ಳಿಗಳಿಗೆ ನೀರು ಸರಬರಾಜು ಮಾಡುವ ವಿಷಯದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯೊಂದಿಗೆ ಸಮಾಲೋಚಿಸಿ, ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಮಂಡಿಸಬೇಕೆಂದು ಸಚಿವ ಸಂಪುಟವು ಇಚ್ಛಿಸಿತು"**

ಅದರಂತೆ ಕನನೀಸ ಮತ್ತ ಒಚ ಮಂಡಳಿಯು ಈ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯೊಂದಿಗೆ ಸಮಾಲೋಚಿಸಿ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಯಿತು. ಅದರಂತೆ ಮಂಡಳಿಯು ಮೇಲೆ ಓದಲಾದ ಕ್ರಮಾಂಕ(2)ರ ಪತ್ರದಲ್ಲಿ ಅಂದಾಜು ಪಟ್ಟಿಯನ್ನು ರೂ.4000.00ಲಕ್ಷಗಳಿಂದ ರೂ.5486.00ಲಕ್ಷಗಳಿಗೆ ಪರಿಷ್ಕರಿಸಿ ಆಡಳಿತಾತ್ಮಕ ಅನುಮೋದನೆ ಕೋರಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ ಶೇ.50 | ರೂ.2536.11 ಲಕ್ಷಗಳು. |
| ಹಣಕಾಸು ಸಂಸ್ಥೆಗಳಿಂದ ಸಾಲ ಶೇ.50 | ರೂ.2536.11 ಲಕ್ಷಗಳು |
| ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಂತಿಕೆ | ರೂ. 413.78 ಲಕ್ಷಗಳು |
| **ಒಟ್ಟು** | **ರೂ.5486.00 ಲಕ್ಷಗಳು** |

2) ಮೇಲಿನ ಆರ್ಥಿಕ ಮಾದರಿಯನ್ನು ಪರಿಶೀಲಿಸಲಾಗಿ, ಈ ಹಿಂದೆ, ಸದರಿ ಯೋಜನೆಗೆ ರೂ.4000.00 ಲಕ್ಷಗಳ ಮೊತ್ತದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡುವಾಗ ಆರ್ಥಿಕ ಮಾದರಿಯು ಶೇ.50ರಂತೆ ಕರ್ನಾಟಕ ಸರ್ಕಾರ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಲು ಅನುಮೋದನೆ ನೀಡಲಾಗಿತ್ತು. ಆದರೆ, ಪ್ರಸ್ತುತ ಯೋಜನೆಯ ಅಂದಾಜು ಪಟ್ಟಿಯನ್ನು ಈ ಹಿಂದೆ ಸಲ್ಲಿಸಿದ್ದ 2007–08ನೇ ಸಾಲಿನ ದರಪಟ್ಟಿಗೆ ಬದಲಾಗಿ 2008–09ನೇ ಸಾಲಿನ 2011–12ನೇ ಸಾಲಿಗೆ ಮುಂದುವರೆದ ದರಪಟ್ಟಿಯನ್ನು ಆಧರಿಸಿ ತಯಾರಿಸಿರುವ ಪ್ರಯುಕ್ತ ಮತ್ತು ಈ ಹಿಂದೆ

ಮಂಡಳಿಯು ಸದರಿ ಯೋಜನೆಗೆ ಅಗತ್ಯವಿರುವ ನೀರನ್ನು ಸಾಗರದ ಪಟ್ಟಣದ ಹತ್ತಿರವಿರುವ ಬೆಳ್ಳಣ್ಣೆ ಬಳಿಯಿಂದ ಪಡೆಯಲು ಉದ್ದೇಶಿಸಿ, ಅದರಂತೆ ಅಂದಾಜು ತಯಾರಿಸಿದ್ದು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸದರಿ ಯೋಜನೆಯ ಮೂಲಕೇಂದ್ರ ಸ್ಥಾವರವನ್ನು ಕಾರ್ಗಲ್ ಅಣೆಕಟ್ಟಿನ ಬಳಿ ಅಂದರೆ, ಪ್ರಸ್ತಾವಿತ ಬೆಳ್ಳಣ್ಣೆಯಿಂದ ಸುಮಾರು 5.5 ಕಿ.ಮೀ., ದೂರವಿರುವ ಸ್ಥಳಕ್ಕೆ ವರ್ಗಾಯಿಸಬೇಕಾದ್ದರಿಂದ, ರಾಜ್ಯ ಸರ್ಕಾರದ ಅನುದಾನ ಮತ್ತು ಹಣಕಾಸು ಸಂಸ್ಥೆಗಳ ಸಾಲದಲ್ಲಿ ತಲಾ ರೂ.536.11 ಲಕ್ಷಗಳು ಹೆಚ್ಚಾಗಿರುತ್ತದೆ ಅಂದರೆ ಒಟ್ಟು ರೂ.1072.22 ಲಕ್ಷಗಳ ಮೊತ್ತವನ್ನು ಪರಿಷ್ಕೃತ ಆರ್ಥಿಕ ಮಾದರಿಯಂತೆ ಭರಿಸಬೇಕಾಗಿರುತ್ತದೆ.

3) ಮಂಡಳಿಯ 2010-11ನೇ ಸಾಲಿನ ಕ್ರಿಯಾ ಯೋಜನೆಯನ್ನು ಮಂಡಳಿಯು ಒಟ್ಟು ರೂ.961.06 ಕೋಟಿಗಳಿಗೆ ತಯಾರಿಸಿದ್ದು, ಸದರಿ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಯನ್ನು ಪ್ರವರ್ಗ 'ಸಿ' ಯಡಿಯಲ್ಲಿ ಸೇರಿಸಿ, ಪ್ರಸ್ತುತ ಸಾಲಿಗೆ ಯೋಜನೆಯ ಅಂದಾಜಿನ 1/3 ರಷ್ಟು ಮೊತ್ತವನ್ನು ಅನುವು ಮಾಡಲಾಗುವುದು.

ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 18 ಯುಡಬ್ಲ್ಯೂಎಸ್ 2010, ಬೆಂಗಳೂರು, ದಿನಾಂಕ::07.05.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾಗರ ಪಟ್ಟಣಕ್ಕೆ ಶರಾವತಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಲಿಂಗನಮಕ್ಕಿ ರಿಸರ್‌ವಾಯರ್ ಹಿನ್ನೀರಿನಿಂದ ನೀರು ಸರಬರಾಜು ಮಾಡುವ ಯೋಜನೆಯನ್ನು ರೂ.4000.00ಲಕ್ಷಗಳಿಂದ ಯೋಜನೆಯ ಮಾರ್ಗ ಮಧ್ಯದಲ್ಲಿ ಬರುವ 14 ಹಳ್ಳಿಗಳಿಗೆ ನೀರು ಸರಬರಾಜು ಮಾಡಲು ಯೋಜನೆಯ ಅಂದಾಜನ್ನು ರೂ.5486.00 ಲಕ್ಷಗಳಿಗೆ (ರೂ.ಐದು ಸಾವಿರದ ನಾಲ್ಕುನೂರ ಎಂಬತ್ತಾರು ಲಕ್ಷಗಳು ಮಾತ್ರ) ಪರಿಷ್ಕರಿಸಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು **"ನಗರ ನೀರು ಸರಬರಾಜು ಯೋಜನೆಯಡಿ"** ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಿದೆ.

1) The Escalation charges should not form part of the estimate. It should be borne by the concerned CMC. The estimate should be reduced to such extent.
2) ETP & contingencies to be restricted to 5%.
3) Resolution of the Local body to bear the project cost should be sought and if any deviations and extra item works or variations should be taken up only after the consent of the Urban Local Body with a condition for the commitment of the ULB for the extra cost.
4) Adequate provision to be made by the Board in the following Years for timely completion of the Project.
5) Escalations and Tender premium should be approved with the prior consent of the ULB.
6) Water rates as proposed by KUWS&DB have to be implemented to meet O & M cost.
7) KTPP provisions, quality control and timely completion should be ensured.
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD /73/ Exp-9:2011, ದಿನಾಂಕ: 7.05.2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1275

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಅಭ್ಯರ್ಥಿಗಳನ್ನು ಪ್ಯಾರಾ ಮೆಡಿಕಲ್ ಕೋರ್ಸುಗಳಿಗೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** (1) ಪತ್ರ ಸಂಖ್ಯೆ: ಸಕನಿ/ಪಜಾಉಯೋ.2/ಸಿಆರ್-4/2010-11 ದಿನಾಂಕ:30-06-2010.

(2) ಪತ್ರಸಂಖ್ಯೆ:ಪವಕನಿ:ಗಿಉಯೋ/ಕಆ:ಸಿಆರ್:22:2010-11 ದಿನಾಂಕ: 15-07-2010

**ಪ್ರಸ್ತಾವನೆ:**

ರಾಜ್ಯದಲ್ಲಿ ವೈದ್ಯಕೀಯ ಕಾಲೇಜುಗಳು ಹಾಗೂ ವೈದ್ಯಕೀಯ ಸಂಸ್ಥೆಗಳು ನಡೆಸುತ್ತಿರುವ ವಿವಿಧ ಪ್ಯಾರಾ ಮೆಡಿಕಲ್ ಕೋರ್ಸುಗಳಿಗೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳನ್ನು ನಿಯೋಜಿಸಲು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಹಾಗೂ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಕ್ರಮವಾಗಿ ಮೇಲೆ ಕ್ರ.ಸಂ.(1) ಮತ್ತು (2)ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಕಇ 94 ಎಸ್‌ಎಲ್‌ಪಿ 2010, ದಿನಾಂಕ : 03ನೇ ಮೇ, 2011**

ಕರ್ನಾಟಕ ಪ್ಯಾರಾ ಮೆಡಿಕಲ್ ಮಂಡಳಿಯ ಮಾನ್ಯತೆ ಪಡೆದ ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಈ ಕೆಳಕಂಡ ಕೋರ್ಸ್‌ಗಳಿಗೆ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಮಂಜೂರಾತಿ ನೀಡಲಾಗಿದೆ.

(i) diploma in medical Laboratory technology,

(ii) diploma in X-ray technology,

(iii) diploma in Operation theater technology,

(iv) diploma in Ophthalmic technology,

(v) diploma in dental mechanics

(vi) diploma in dialysis technology

**ಯೋಜನಾ ವಿವರ ಮತ್ತು ಷರತ್ತುಗಳು :–**

| ಕ್ರ ಸಂ. | ಐಟಂ | ಸಂಕ್ಷಿಪ್ತ ವಿವರ | |
|---|---|---|---|
| 1 | ವಿದ್ಯಾರ್ಹತೆ | ಎಸ್.ಎಸ್.ಎಲ್.ಸಿ./ಪಿ.ಯು.ಸಿ.(ಪಿಸಿಎಂಬಿ) | |
| | | ಮೇಲ್ಕಂಡ ಪರೀಕ್ಷೆಯಲ್ಲಿ ಗಳಿಸಿದ ಕನಿಷ್ಠ ಅಂಕಗಳು – 35 ಪ್ರತಿಶತ ಮತ್ತು ಅದಕ್ಕೂ ಹೆಚ್ಚು | |
| 2 | ಕೋರ್ಸ್ ಅವಧಿ | ಎಸ್.ಎಸ್.ಎಲ್.ಸಿ. ಉತ್ತೀರ್ಣರಾದವರಿಗೆ–3 ವರ್ಷ<br>ಪಿ.ಯು.ಸಿ. (ಪಿ.ಸಿ.ಎಂ.ಬಿ.) ಉತ್ತೀರ್ಣರಾದವರಿಗೆ –2 ವರ್ಷ | |
| 3 | ವಯೋಮಿತಿ | ಕನಿಷ್ಠ 16 ವರ್ಷ & ಗರಿಷ್ಠ 25 ವರ್ಷ | |
| 4 | ಕೋರ್ಸಿನ ಶುಲ್ಕ | ಸರ್ಕಾರಿ ಸಂಸ್ಥೆಗಳಲ್ಲಿನ ಸೀಟುಗಳಿಗೆ | ರೂ.2500=00<br>(ಪ್ರವೇಶ ಶುಲ್ಕ ರೂ.500=00, ಬೋಧನಾ ಶುಲ್ಕ ರೂ.2000=00) |
| | | ಖಾಸಗಿ ಸಂಸ್ಥೆಗಳಲ್ಲಿನ ಸರ್ಕಾರಿ ಕೋಟಾ ಸೀಟುಗಳಿಗೆ ಅಥವಾ ಮ್ಯಾನೇಜ್‌ಮೆಂಟ್ ಕೋಟಾದಲ್ಲಿ ಸೀಟು ಪಡೆದವರಿಗೆ | ರೂ.4500=00<br>(ಪ್ರವೇಶ ಶುಲ್ಕ ರೂ.500=00, ಬೋಧನಾ ಶುಲ್ಕ ರೂ.4000=00) |
| | | ಶಿಷ್ಯವೇತನ (ಎಲ್ಲರಿಗೂ ಅನ್ವಯಿಸುವಂತೆ) | ರೂ.1000=00 (ಪ್ರತಿ ತಿಂಗಳು) ಆರೋಗ್ಯ ಇಲಾಖೆಯಿಂದ ಅಥವಾ ಇತರ ಮೂಲಗಳಿಂದ ಶಿಷ್ಯವೇತನ ಪಡೆಯುತ್ತಿದ್ದಲ್ಲಿ, ಅಂತಹವರು ಈ ಯೋಜನೆಯಡಿಯಲ್ಲಿ ಮತ್ತೆ ಶಿಷ್ಯವೇತನ ಪಡೆಯಲು ಅರ್ಹರಿರುವುದಿಲ್ಲ. |
| 5 | ತರಬೇತಿಗೆ ನಿಗದಿಪಡಿಸಿದ ವಾರ್ಷಿಕ ಗುರಿ | ಪರಿಶಿಷ್ಟ ಜಾತಿ ಅಭ್ಯರ್ಥಿಗಳು – 750<br>ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು – 250<br>**ಒಟ್ಟು – 1000** | |

**ಈ ಯೋಜನೆಗೆ ಅನ್ವಯಿಸುವ ಇತರೆ ಷರತ್ತುಗಳು:–**

(1) ಅಭ್ಯರ್ಥಿ ಕರ್ನಾಟಕ ರಾಜ್ಯಕ್ಕೆ ಸೇರಿದವರಾಗಿರಬೇಕು ಅಥವಾ ರಾಜ್ಯದಲ್ಲಿ ಕನಿಷ್ಠ ಏಳು ವರ್ಷಗಳ ಕಾಲ ವ್ಯಾಸಂಗ ಮಾಡಿರಬೇಕು.

(2) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಪೋಷಕರ ವಾರ್ಷಿಕ ಗರಿಷ್ಠ ವರಮಾನ ಅನುಕ್ರಮವಾಗಿ ರೂ.2.00 ಲಕ್ಷ ಮತ್ತು ರೂ.1.08 ಲಕ್ಷ ಆಗಿರುತ್ತದೆ.

(3) ಅಭ್ಯರ್ಥಿಗಳನ್ನು ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡತಕ್ಕದ್ದು.

(4) ಇಲಾಖೆಗಳು ಆಯಾ ವರ್ಷದಲ್ಲಿ ಲಭ್ಯವಿರುವ ಅನುದಾನಕ್ಕೆ ಸೀಮಿತಗೊಳಿಸಿ ಅಭ್ಯರ್ಥಿಗಳ ಸಂಖ್ಯೆ ನಿಗದಿಪಡಿಸಿಕೊಳ್ಳತಕ್ಕದ್ದು.

(5) ಈ ಯೋಜನೆಗೆ ರಾಜ್ಯ ಸರ್ಕಾರ ಅನುದಾನ ಒದಗಿಸುತ್ತಿದ್ದರೂ ಭಾರತ ಸರ್ಕಾರ ಯೋಜನೆಯಡಿ ಅಂತಹ ತರಬೇತಿಗೆ ಲಭ್ಯವಿರುವ ಅನುದಾನ/ವಿದ್ಯಾರ್ಥಿ ವೇತನವನ್ನು ತಪ್ಪದೆ ಪಡೆಯತಕ್ಕದ್ದು.

(6) ಆಯ್ಕೆಯಾದ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ನಿಗದಿಪಡಿಸಿದ ವೆಚ್ಚವನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು ಪಾವತಿಸತಕ್ಕದ್ದು.

(7) ಅಭ್ಯರ್ಥಿಗಳಿಗೆ ಆಯಾ ಇಲಾಖೆಗಳು ನಡೆಸುತ್ತಿರುವ ಸರ್ಕಾರಿ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ನೀಡಬಹುದು.

(8) ಮೊದಲನೇ ವರ್ಷ ಆಯ್ಕೆಯಾದ ಅಭ್ಯರ್ಥಿಗಳು ನಂತರದ ವರ್ಷಗಳಲ್ಲಿ ಪ್ರತಿ ವರ್ಷ ನವೀಕರಣ ಅರ್ಜಿ ಸಲ್ಲಿಸತಕ್ಕದ್ದು.

(9) ತರಬೇತಿ ಪಡೆಯುವ ಅಭ್ಯರ್ಥಿಗಳು ಶಿಕ್ಷಣ ಸಂಸ್ಥೆಯಲ್ಲಿ ಮಾಹೆಯಾನ ಶೇಕಡ 75 ರಷ್ಟು ಮತ್ತು ಅದಕ್ಕೂ ಹೆಚ್ಚಿನ ಹಾಜರಾತಿ ಹೊಂದಿರತಕ್ಕದ್ದು (ಈ ಕುರಿತಂತೆ ಶಾಲಾ : ಕಾಲೇಜಿನ ಪ್ರಾಚಾರ್ಯರಿಂದ ದೃಢೀಕರಿಸಿದ ಹಾಜರಾತಿ ತಃಖ್ತೆ ಪಡೆದು ತರಬೇತಿ ಭತ್ಯೆ ಮಂಜೂರು ಮಾಡುವುದು).

(11) ಅಭ್ಯರ್ಥಿಗಳು ಆಯಾ ಸಾಲಿನ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಉತ್ತೀರ್ಣರಾಗದ ಅಭ್ಯರ್ಥಿಗಳು ತರಬೇತಿ ಭತ್ಯೆ ಪಡೆಯಲು ಅರ್ಹರಾಗಿರುವುದಿಲ್ಲ. ಆದರೆ carry over system ಇದ್ದಲ್ಲಿ ತರಬೇತಿ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

(12) ಸುಳ್ಳು ಮಾಹಿತಿ/ಜಾತಿ ಪ್ರಮಾಣ ಪತ್ರ ನೀಡಿ ಪ್ರವೇಶ/ತರಬೇತಿ ಭತ್ಯೆ ಪಡೆದಿದ್ದಲ್ಲಿ ಅಂತಹ ಅಭ್ಯರ್ಥಿಗಳ ತರಬೇತಿಗೆ ನೀಡಲಾದ ಮೊತ್ತವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಹಿಂದಿರುಗಿಸತಕ್ಕದ್ದು.

(13) ಯಾವುದೇ ಅಭ್ಯರ್ಥಿ ಪ್ಯಾರಾ ಮೆಡಿಕಲ್ ತರಬೇತಿ ಪೂರ್ಣಗೊಳಿಸದೆ ಮಧ್ಯದಲ್ಲಿ ಬಿಟ್ಟು ಹೋದಲ್ಲಿ ಜಿಲ್ಲಾ ಮಟ್ಟದ ಅಧಿಕಾರಿಗಳು ವಿಚಾರಣೆ ನಡೆಸಿ ಇಲಾಖೆಯ ಮುಖ್ಯಸ್ಥರಿಗೆ ವರದಿ ಸಲ್ಲಿಸತಕ್ಕದ್ದು. ಅಂತಹ ಪ್ರಕರಣಗಳಲ್ಲಿ ಪರಿಶೀಲಿಸಿ ಇಲಾಖಾ ಮುಖ್ಯಸ್ಥರು ಅಂತಿಮ ನಿರ್ಣಯ ತೆಗೆದುಕೊಳ್ಳುವುದು. ಒಂದು ಪಕ್ಷ, ಸಮಂಜಸವಾದ ಕಾರಣವಿಲ್ಲದಿದ್ದಲ್ಲಿ ಸಂಬಂಧಪಟ್ಟ ಅಭ್ಯರ್ಥಿಗಳಿಗೆ ನೀಡಲಾದ ಮೊತ್ತವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಹಿಂದಿರುಗಿಸತಕ್ಕದ್ದು. ಇದಕ್ಕೆ ಅನುಗುಣವಾಗಿ ಒಪ್ಪಿರುವ ಬಗ್ಗೆ ವಿದ್ಯಾರ್ಥಿ ಮತ್ತು ಅವರ ತಂದೆ/ತಾಯಿ ಅಥವಾ ಪೋಷಕರು ರೂ.50/–ಗಳ ಛಾಪಾ ಕಾಗದದಲ್ಲಿ ಒಪ್ಪಿಗೆ ಪತ್ರ ನೀಡತಕ್ಕದ್ದು.

(14) ಉಲ್ಲೇಖಿತ ಕೋರ್ಸುಗಳಿಗೆ ಅಭ್ಯರ್ಥಿಗಳನ್ನು ಈ ಕೆಳಕಂಡ ರಾಜ್ಯ ಮಟ್ಟದ ಸಮಿತಿ ಆಯ್ಕೆ ಮಾಡುವುದು.

- ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ – ಅಧ್ಯಕ್ಷರು
- ಆಯುಕ್ತರು/ನಿರ್ದೇಶಕರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ – ಸದಸ್ಯರು
- ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ – ಸದಸ್ಯರು
- ನಿದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ – ಸದಸ್ಯರು
- ಜಂಟಿ ನಿರ್ದೇಶಕರು (ಪರಿಶಿಷ್ಟ ಜಾತಿ ಉಪಯೋಜನೆ) ಸಮಾಜ ಕಲ್ಯಾಣ ಇಲಾಖೆ – ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿ ಕೌನ್ಸಿಲಿಂಗ್ ಮುಖಾಂತರ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಈ ಕೆಳಗಿನಂತೆ ನಿಯೋಜಿಸುವ ವ್ಯವಸ್ಥೆ ಮಾಡತಕ್ಕದ್ದು:–

(ಅ)ಆಯಾ ಇಲಾಖೆಗಳು ರಾಜ್ಯ ಮಟ್ಟದಲ್ಲಿ ಜೂನ್/ಜುಲೈ ತಿಂಗಳಲ್ಲಿ ದಿನಪತ್ರಿಕೆ, ದೂರದರ್ಶನ, ರೇಡಿಯೋ, ಇತರೆ ಮಾಧ್ಯಮಗಳ ಮೂಲಕ ಪ್ರಕಟಣೆ ನೀಡಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವುದು.

(ಆ) ವಿವಿಧ ಸಂಸ್ಥೆಗಳಲ್ಲಿ ಸರ್ಕಾರಿ ಕೋಟಾಕ್ಕೆ ಲಭ್ಯವಿರುವ ಸೀಟುಗಳ ಮಾಹಿತಿ ಪಡೆದುಕೊಂಡು ಅಭ್ಯರ್ಥಿಗಳನ್ನು ಕೌನ್ಸಿಲಿಂಗ್ ಮುಖಾಂತರ ಆಯ್ಕೆ ಮಾಡಿ ಸಂಸ್ಥೆಗಳಿಗೆ ನಿಯೋಜಿಸತಕ್ಕದ್ದು. ಸ್ವಂತ ಆಸ್ಪತ್ರೆ : ನಿಗದಿತ ಮೂಲಭೂತ ಸೌಕರ್ಯ ಹೊಂದಿರುವ ಸಂಸ್ಥೆಗಳಿಗೆ ಆದ್ಯತೆ ನೀಡುವುದು.

(ಇ) ಅಭ್ಯರ್ಥಿಗಳು ಕೌನ್ಸಿಲಿಂಗ್ ಸಮಯದಲ್ಲಿ ಅವರ ಅರ್ಹತೆಗೆ ಸಂಬಂಧಿಸಿದ ಮೂಲ ಪ್ರಮಾಣ ಪತ್ರಗಳನ್ನು (ಜಾತಿ ಪ್ರಮಾಣ ಪತ್ರವು ಸೇರಿದಂತೆ) ಹಾಜರುಪಡಿಸತಕ್ಕದ್ದು.

(ಈ) ಕಳೆದ ಮೂರು ವರ್ಷಗಳಲ್ಲಿ ಉತ್ತಮ ಫಲಿತಾಂಶ ಪಡೆದಿರುವ ಸಂಸ್ಥೆಗಳಿಗೆ ಅಭ್ಯರ್ಥಿಗಳನ್ನು ನಿಯೋಜಿಸುವುದು.

(ಉ) ಅಭ್ಯರ್ಥಿಗಳ ಆಯ್ಕೆ ಪ್ರಕ್ರಿಯೆಯನ್ನು ಆಗಸ್ಟ್ ತಿಂಗಳೊಳಗೆ ಪೂರ್ಣಗೊಳಿಸತಕ್ಕದ್ದು.

(15) ಕೌನ್ಸಿಲಿಂಗ್ ಮುಖಾಂತರ ಪ್ರವೇಶ ಪಡೆಯದೇ ಖಾಸಗಿ ಸಂಸ್ಥೆಗಳಲ್ಲಿ ನೇರವಾಗಿ ಸ್ವಂತ ಪ್ರವೇಶ ಪಡೆದ ಅಭ್ಯರ್ಥಿಗಳು ಈ ಯೋಜನೆಯಡಿ ಆರ್ಥಿಕ ಸಹಾಯ ಪಡೆಯಲು ಅರ್ಹರಿರುವುದಿಲ್ಲ. ಆದರೆ, ಅಂತಹ ಅಭ್ಯರ್ಥಿಗಳು ವಿದ್ಯಾರ್ಥಿ ವೇತನಕ್ಕೆ ಅರ್ಹರಿದ್ದಲ್ಲಿ ಪ್ರತ್ಯೇಕವಾಗಿ ಪಡೆಯಬಹುದು.

(16) ಜಿಲ್ಲಾ ಸಮಾಜ ಕಲ್ಯಾಣ/ಪರಿಶಿಷ್ಟ ವರ್ಗಗಳ ಅಧಿಕಾರಿಗಳು ಈ ಯೋಜನೆಯಡಿ ಆರ್ಥಿಕ ಸಹಾಯ ಮಂಜೂರು ಮಾಡಿ ವಿತರಿಸುವ ಅಧಿಕಾರ ಹೊಂದಿರುತ್ತಾರೆ. ಈ ರೀತಿ ನಿಯೋಜಿಸುವ ಅಭ್ಯರ್ಥಿಗಳ ಮೂಲ ಅರ್ಜಿಗಳಲ್ಲದೆ ಶಾಲಾ ಕಾಲೇಜುಗಳ ವಿವರ ಹಾಗೂ ಇತರೆ ಮಾಹಿತಿಯನ್ನು ಪ್ರತ್ಯೇಕ ರಿಜಿಸ್ಟರ್‌ನಲ್ಲಿ ನಿರ್ವಹಿಸತಕ್ಕದ್ದು. ಈ ರಿಜಿಸ್ಟರ್‌ನ್ನು ರಾಜ್ಯ ಮಟ್ಟದ ಅಧಿಕಾರಿಗಳು ಅವರ ತಪಾಸಣೆ ವೇಳೆಯಲ್ಲಿ ಪರಿಶೀಲಿಸತಕ್ಕದ್ದು.

(17) ಯಾವುದೇ ಅಭ್ಯರ್ಥಿಯ ಕೋರ್ಸಿಗೆ ಪ್ರವೇಶ ಪಡೆದ ನಂತರ ಬೇರೆ ಕಾಲೇಜು/ಶಾಲೆಗೆ ವರ್ಗಾವಣೆಯಾಗಲು ಅಥವಾ ಕೋರ್ಸನ್ನು ಬದಲಾಯಿಸಲು ಇಚ್ಛಿಸಿದ್ದಲ್ಲಿ ರೂ.1,000.00 ಮೊತ್ತವನ್ನು (ಸ್ವಂತ ವೆಚ್ಚದಲ್ಲಿ) ಕರ್ನಾಟಕ ಪ್ಯಾರಾ ಮೆಡಿಕಲ್ ಬೋರ್ಡಿಗೆ ಪಾವತಿಸತಕ್ಕದ್ದು.

ಈ ಆದೇಶವು 2011–12ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುತ್ತದೆ.

ಆ ಸಂಬಂಧ ವೆಚ್ಚವನ್ನು ಪರಿಶಿಷ್ಟ ಜಾತಿ ಉಪಯೋಜನೆ/ಗಿರಿಜನ ಉಪಯೋಜನೆ (ಕ್ರೋಢೀಕೃತ ಅನುದಾನ) ಅಡಿ ಭರಿಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ 689 ವೆಚ್ಚ–3/2010 ದಿನಾಂಕ:14.01.2011ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ.ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1276

## Energy Secretariat

**Sub:** Transfer of 5.0 MW wind power capacity in favour of M/s KSK Wind Energy Nandgoan Athni Private Limited – reg.

**Read:** 1. Government Order No: EN 208 NCE 2005 dated: 19.8.2005.

2. Letter No: KRED/08/KSKWENAPL(5.00)-FIZA/2011/1320 dated: 29.4.2011/07.05.2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, 36.35 MW Wind Power Project was allotted to M/s Fiza Developers & Inter Trade Private Limited at Belgaum and Chamarajanagar Districts.

In the letter read at (2) above, the Managing Director, Karnataka Renewable Energy Development Limited, Bangalore has recommended to the Government for transfer of 5.0 MW wind power capacity in favour of M/s KSK Wind Energy Nandgoan Athni Private Limited at Athni and Nandgoan villages of Belgaum District from M/s Fiza Developers & Inter Trade Private Limited.

The proposal has been examined in detail and hence the following Order: -

**GOVERNMENT ORDER NO: EN 226 NCE 2011, BANGALORE, DATED: 10th MAY, 2011.**

Government accords approval for transfer of 5.0 MW wind power capacity in favour of M/s KSK Wind Energy Nandgoan Athni Private Limited at Athni and Nandgoan villages of Belgaum District from M/s Fiza Developers & Inter Trade Private Limited as detailed below.

| Village Name | District | MW | Land Survey No. | No. of WTGs | Extent of area (Ha) | Wind Turbine Generator's Numbers |
|---|---|---|---|---|---|---|
| Athni | Belgaum | 2.00 | 162 IA/A & 162 IB + 1 A/2/1 | 8 Nos. (8x250 kw) | 5.20 | A-1 to A-8 |
| Nandagaon | | 3.00 | 13-4 | 12 Nos. (12 x 250 kw) | 8.02 | A-9 to A-20 |
| | | 5.00 | | 20 Nos. | 13.22 | |

1. M/s KSK Wind Energy Nandgoan Athni Private Limited shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals.
3. **Wheeling & Banking** agreement is assigned to HESCOM. HESCOM shall execute the Wheeling & Banking agreement with M/s KSK Wind Energy Nandgoan Athni Private Limited.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,

**SURESH.B.KRISHNAPPANAVAR**

Under Secretary to Government,

Energy Department

P.R. 1277

## Energy Secretariat

**Sub:** Transfer of 11.5 MW wind power capacity in favour of M/s KSK Wind Power Sankonahatti Athni Private Limited-reg.

**Read:** 1. Government Order No: EN 318 NCE 2006 dated: 16.10.2006.

2. Letter No: KRED/08/KSKWESAPL(11.50)-Four EF/2011/1319 dated: 29.4.2011/07.05.2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, 56.50 MW Wind Power Project was allotted to M/s Four EF Wind Power Private Limited at Gulbarga, Bagalkot and Belgaum Districts.

In the letter read at (2) above, the Managing Director, Karnataka Renewable Energy Development Limited, Bangalore has recommended to the Government for transfer of 11.5 MW wind power capacity in favour of M/s KSK Wind Power Sankonahatti Athni Private Limited at Parthanahalli, Gundewadi and Chamkeri villages of Belgaum District from M/s Four EF Wind Power Private Limited.

The proposal has been examined in detail and hence the following Order: -

**GOVERNMENT ORDER NO: EN 225 NCE 2011, BANGALORE, DATED: 10th MAY, 2011.**

Government accords approval for transfer of 11.5 MW wind power capacity in favour of M/s KSK Wind Power Sankonahatti Athni Private Limited at Parthanahalli, Gundewadi and Chamkeri villages of Belgaum District from M/s Four EF Wind Power Private Limited as detailed below.

| Village Name | District | MW | Land Survey No. | No. of WTGs | Extent of area (Ha) | Wind Turbine Generator's Numbers |
|---|---|---|---|---|---|---|
| Parthanahalli | Belgaum | 3.50 | 15/3 | 7 Nos. | 1.00 | P-8, 9,10,12,16, 18 & 19 |
| Gundewadi | | 3.00 | 15/1 & 15/2 | 6 Nos. | 04.26 | P-1,2,3,4,5 &6 |
| Chamkeri | | 5.00 | 97/1 & 97/2 | 10 Nos. | 13.06 | P-7,11,13,14,15,17,20, 21,22&23. |
| | | 11.50 | | (23 Nos x 500kw) | 25.22 | |

1. M/s KSK Wind Power Sankonahatti Athni Private Limited shall execute an agreement with Government within 45 (forty five) days from the date of issue of this Order.
2. Karnataka Power Transmission Corporation Limited to accord power evacuation and grid synchronization approvals.
3. **Wheeling & Banking** agreement is assigned to HESCOM. HESCOM shall execute the Wheeling & Banking agreement with M/s KSK Wind Power Sankonahatti Athni Private Limited.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,

P.R. 1278

**SURESH.B.KRISHNAPPANAVAR**

Under Secretary to Government,

Energy Department

**ಇಂಧನ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಎನ್ 209 ಎನ್‌ಸಿಇ 2011, ಬೆಂಗಳೂರು, ದಿನಾಂಕ: 03ನೇ ಮೇ, 2011**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 231 ಎನ್‌ಸಿಇ 2009 ದಿನಾಂಕ: 08.1.2010ರ ಆದೇಶದ ಭಾಗದಲ್ಲಿ ನಮೂದಿಸಲಾಗಿರುವ 'Weir-Latitude 12$^{0}$30'15``N, Longtitude 77$^{0}$0'30''E ಹಾಗೂ Power House Latitude 12$^{0}$30'25``, Longtitude 77$^{0}$0'40'' ಅನ್ನು ತಿದ್ದುಪಡಿ ಮಾಡಿಕೊಂಡು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

**Weir-Latitude 12$^{0}$30'45``N, Longtitude 76$^{0}$59'52''E ಹಾಗೂ Power House Latitude 12$^{0}$30'45``, Longtitude 76$^{0}$59'52''**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1279

**ಸುರೇಶ್ ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## Forest, Ecology and Environment Secretariat

**ADDENDUM**

**No. FEE 61 FWL 2011, Bangalore, dated: 04th May, 2011**

In the order portion of the Government order No. FEE 81 FWL 2008 dated: 11-07-2008, after S.L.No. 02 the following is inserted :-

"2(a) Chief Conservator of Forests (Project Elephant), Mysore"

By Order and in the name of the Governor of Karnataka,

P.R. 1280

**A.P. RAMAKRISHNA**

Under Secretary to Government,

Forest, Ecology and Environment Department

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರದಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 'ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ' ನೀಡಲು ಆಯ್ಕೆ ಸಮಿತಿ ರಚಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿ ಪರಿಸರ ಕ್ಷೇತ್ರಕ್ಕೆ ಮಹತ್ವ ನೀಡುವ ದೃಷ್ಟಿಯಿಂದ ಪರಿಸರ ಸಂರಕ್ಷಣೆಗಾಗಿ ವಿಶೇಷ ಸೇವೆ ಸಲ್ಲಿಸಿರುವ ವ್ಯಕ್ತಿ / ಸಂಸ್ಥೆಗಳಿಗೆ ಪರಿಸರ ಪ್ರಶಸ್ತಿಯನ್ನು ಸರ್ಕಾರವು ಪ್ರತಿ ವರ್ಷ ನೀಡುತ್ತಾ ಬಂದಿದೆ ಅದೇ ರೀತಿ 2010–11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಜಿಗಳನ್ನು ಆಹ್ವಾನಿಸಿ ಪತ್ರಿಕಾ ಪ್ರಕಟಣೆ ಹೊರಡಿಸಲಾಗಿದೆ. ಪರಿಸರ ಸಂರಕ್ಷಣಾ ವ್ಯಕ್ತಿ / ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವುದು ಈ ಪ್ರಶಸ್ತಿಗಳ ಉದ್ದೇಶವಾಗಿದೆ. ಈ ಪ್ರಶಸ್ತಿಯು ತಲಾ ರೂ. 1.00/– (ಒಂದು ಲಕ್ಷ ರೂ.) ಮಾತ್ರ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ ಟ್ರಸ್ಟ್‌ಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಆರಂಭ ಶೀಲತೆ / ಕೊಡುಗೆಯಲ್ಲಿ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ಪ್ರಶಸ್ತಿಗಳನ್ನು ರಾಜ್ಯದ ಮಲೆನಾಡು ಮತ್ತು ಕರಾವಳಿ ವಲಯ, (ಬೆಳಗಾವಿ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳು) ದಕ್ಷಿಣ ವಲಯ (ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು) ಮತ್ತು ಉತ್ತರ ವಲಯ (ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗಾ, ಯಾದಗಿರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು) ಗಳಲ್ಲಿನ ತಲಾ ಒಬ್ಬರು ವ್ಯಕ್ತಿ ಮತ್ತು ಒಂದು ಸಂಸ್ಥೆಗೆ ನೀಡಲಾಗುವುದು.

ಸರ್ಕಾರದ ಪ್ರಕಟಣೆಯಂತೆ ಸ್ವೀಕೃತವಾಗಿರುವ ಮನವಿ, ನಾಮನಿರ್ದೇಶನಗಳನ್ನು ಪರಿಶೀಲಿಸಲು ಹಾಗೂ ಪರಿಸರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ವ್ಯಕ್ತಿ / ಸಂಸ್ಥೆಗಳನ್ನು ಸ್ವತಃ ಗುರುತಿಸಿ, ಪ್ರಶಸ್ತಿಗೆ ಶಿಫಾರಸ್ಸು ಮಾಡಲು ಕೆಳಕಂಡ ಅಧ್ಯಕ್ಷರು, ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದರ್ಶಿ<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | – ಅಧ್ಯಕ್ಷರು |
| 2) | ಸರ್ಕಾರದ ಕಾರ್ಯದರ್ಶಿ<br>(ಪರಿಸರ ಮತ್ತು ಜೀವಿಶಾಸ್ತ್ರ)<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | – ಸದಸ್ಯರು |
| 3) | ಸರ್ಕಾರದ ಕಾರ್ಯದರ್ಶಿ (ಅರಣ್ಯ)<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | – ಸದಸ್ಯರು |
| 4) | ಅಧ್ಯಕ್ಷರು,<br>ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | – ಸದಸ್ಯರು |
| 5) | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ<br>ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | – ಸದಸ್ಯರು |
| 6) | ಸದಸ್ಯ ಕಾರ್ಯದರ್ಶಿ<br>ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು | – ಸದಸ್ಯರು |
| 7) | ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ<br>ಸಂಶೋಧನಾ ಸಂಸ್ಥೆ, ಬೆಂಗಳೂರು | – ಸದಸ್ಯರು |
| 8) | ಶ್ರೀ ಅನಂತ ಹೆಗಡೆ ಆಶೀಸರ,<br>ಅಧ್ಯಕ್ಷರು, ಪಶ್ಚಿಮ ಘಟ್ಟ ಸಂರಕ್ಷಣಾ ಕಾರ್ಯಪಡೆ<br>ಕೊಠಡಿ ಸಂಖ್ಯೆ: 307, 3ನೇ ಮಹಡಿ,<br>ವಿಧಾನಸೌಧ, ಬೆಂಗಳೂರು | – ಸದಸ್ಯರು |
| 9) | ಶ್ರೀ ವೈ.ಬಿ. ರಾಮಕೃಷ್ಣ<br>ಅಧ್ಯಕ್ಷರು, ಜೈವಿಕ ಇಂಧನ ಕಾರ್ಯಪಡೆ,<br>ಕೊಠಡಿ ಸಂಖ್ಯೆ: 7, 1ನೇ ಮಹಡಿ,<br>5ನೇ ಹಂತ, ಬಹುಮಹಡಿ ಕಟ್ಟಡ, ಬೆಂಗಳೂರು | – ಸದಸ್ಯರು |
| 10) | ವಿಶೇಷ ನಿರ್ದೇಶಕರು (ತಾಂತ್ರಿಕ ಕೋಶ)<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. | – ಸದಸ್ಯ ಕಾರ್ಯದರ್ಶಿ |

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 3 ಇಎನ್‌ಜಿ 2011 ಬೆಂಗಳೂರು, ದಿನಾಂಕ: 07ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ನೀಡಲು, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ಒಟ್ಟು ಆರು ಅರ್ಹ ವ್ಯಕ್ತಿ ಮತ್ತು ಸಂಸ್ಥೆಗಳ ಆಯ್ಕೆ ಮಾಡಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮೇಲ್ಕಂಡಂತೆ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಸರ್ಕಾರಕ್ಕೆ ಸ್ವೀಕೃತವಾಗಿರುವ ಮನವಿ / ನಾಮನಿರ್ದೇಶನಗಳನ್ನು ಪರಿಶೀಲಿಸಿ, ಶಿಫಾರಸ್ಸು ಮಾಡುವುದರ ಜೊತೆಗೆ ಅರ್ಹ ವ್ಯಕ್ತಿ / ಸಂಸ್ಥೆಗಳನ್ನು ಗುರುತಿಸಿ, ಶಿಫಾರಸ್ಸು ಮಾಡುವ ಅಧಿಕಾರವನ್ನು ಹೊಂದಿರುತ್ತದೆ. ಈ ಸಮಿತಿಯು ಪ್ರಸಕ್ತ ಸಾಲಿಗೆ ಮಾತ್ರ ಅನ್ವಯವಾಗಿದ್ದು, ತನ್ನ ಶಿಫಾರಸ್ಸುಗಳನ್ನು ದಿನಾಂಕ: 25.05.2011ರ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಮನೋಹರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1281

## Forest, Ecology and Environment Secretariat

**Sub:** Diversion of 0.96 ha. of forest land in Sy.No.33, Kuppalu Village, Kadur Taluk, Chikmagalur District for construction of Government High School Building in favour of the Head Master, Government High School, Kuppalu, Kadur Taluk.

**Read:** 1. Letter No.A5(4)GFL.CR.32/08-09, dated:10.02.2011 of Principal Chief Conservator of Forests, Bangalore.

2. Government of India letter No.F.No.11-9/98-FC, dated:03.01.2005 and 11-09-2009.

**Preamble:**

The Principal Chief Conservator of Forests, Bangalore vide his letter dated 10.02.2011 read at (1) above has submitted the proposal for diversion of 0.96 ha.of forest land in Sy.No.33, Kuppalu Village, Kadur Taluk, Chikmagalur District for construction of Government High School Building in favour of the Head Master, Government High School, Kuppalu, Kadur Taluk under the Forest (Conservation) Act, 1980, subject to certain conditions.

This proposal has been examined as per the general approval of Government of India in its letter dated: 03.01.2005 and 11-09-2009 it has been decided to accord sanction for diversion of 0.96 ha. of forest land under the Forest (Conservation) Act, 1980. The proposal has been examined in detail and hence the order.

**GOVERNMENT ORDER NO. FEE 12 FLL 2011, BANGALORE, DATED: 03rd MAY, 2011.**

In the circumstances explained in the preamble above and in accordance with the general approval given by Government of India in their letters dated: 03.01.2005 and 11-09-2009 Government is pleased to accord approval under Forest (Conservation) Act, 1980 for diversion of 0.96 ha. forest land in Sy.No.33, Kuppalu Village, Kadur Taluk, Chikmagalur District for construction of Government High School Building in favour of the Head Master, Government High School, Kuppalu, Kadur Taluk under the Forest (Conservation) Act, 1980, subject to the following conditions.

1. The legal status of the forest land will continue as forest land.
2. The land shall be utilized only for the purpose for which it is released.
3. The leased out area should be used for the purpose for which it is granted. In case the land is not used for the stipulated purpose within one year or when it no longer needed for the stipulated purpose, the area should be resumed to the Forest Department under Section 82 of Karnataka Forest Act, 1963. The Deputy Conservator of Forests concerned is authorized to take necessary action in this regard.
4. No residential building shall be permitted in the proposed area.
5. The user agency has to pay the lease rent as fixed by the Government at the time of sanction and any subsequent orders in this regard.
6. The lease is granted for a period of 20 years.
7. The Karnataka Forest Act 1963 and Rules 1969 and other relevant Acts and Rules will be applicable for any violation.
8. The User Agency has to pay the Net Present Value as per the Hon`ble Supreme Court of India Orders dated: 28/03/2008 and 09/05/2008.
9. The User Agency shall not sub-lease, mortgage and hypothecate the forest area.
10. The User Agency shall ensure that there shall be no damage caused to the surrounding flora and fauna.
11. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forests (HoFF).

By Order and in the name of the Governor of Karnataka,
**H.M. MALLIKARJUNA SWAMY**
Under Secretary to Government,
Forest, Ecology and Environment Department

P.R. 1282

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ॥ ಶಂಕರಪ್ಪ ವಿ. ಮತ್ತು ಡಾ॥ ಶ್ರೀಹರಿ ಬಿ.ಜಿ. ವೈದ್ಯಾಧಿಕಾರಿಗಳು ಇವರುಗಳ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ

**ಓದಲಾಗಿದೆ:** 1) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ(1)/215/ 2008–09 ದಿನಾಂಕ: 05/12/2008, 26/06/2009 ಮತ್ತು 25/3/2011.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳಲ್ಲಿ ಡಾ॥ ಶಂಕರಪ್ಪ ವಿ., ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಪಾತಪಾಳ್ಯ, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಡಾ॥ ಶ್ರೀಹರಿ ಬಿ.ಜಿ. ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ ಇವರುಗಳು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್‌ಎಸ್‌ಹೆಚ್ 2007 ದಿನಾಂಕ: 08/02/2008ರ ಪ್ರಕಾರ ವೈದ್ಯಾಧಿಕಾರಿ ಹುದ್ದೆಗೆ ನೇಮಕಗೊಂಡು ದಿನಾಂಕ: 03/04/2008 ರಂದು ಕರ್ತವ್ಯಕ್ಕೆ ಹಾಜರಾಗಿ, ನಂತರ ವೈಯಕ್ತಿಕ ಕಾರಣಗಳಿಂದ ದಿನಾಂಕ: 1–8–2008ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿರುವುದರಿಂದ ಇವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ಅನುಕ್ರಮವಾಗಿ 01/08/2008 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 09 ಹೆಚ್‌ಎಸ್‌ಹೆಚ್ 2009 ಬೆಂಗಳೂರು, ದಿನಾಂಕ: 02ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಶಂಕರಪ್ಪ ವಿ., ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಪಾತಪಾಳ್ಯ, ಚಿಕ್ಕಬಳ್ಳಾಪುರ ಜಿಲ್ಲೆ ಮತ್ತು ಡಾ॥ ಶ್ರೀಹರಿ ಬಿ.ಜಿ. ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ ಇವರುಗಳು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 01/08/2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1283

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1).

## Commerce and Industries Secretariat

### CORRIGENDUM

**No. CI/388/SPI/2010, Bangalore, dated: 11th May, 2011**

**Sub:** Approval to the Project Proposal of M/s. Atria Power Corporation Ltd., to establish a "250 MW Gas Based Power Plant" at Nalavagal Village, Ranebennur Taluk, Haveri District.

**Read:** Govt. Order No: CI 388 SPI 2010, dated: 14.07.2010

With reference to the above subject, on page 2 of the Govt. Order cited above, under "Infrastructure Facilities", the words

**"1. Land: 117 acres KIADB to acquire and allot as SUC in Nalavagal Village, Ranebennur Taluk, Haveri District"**

Shall be read as under :-

**"1. Land : Total 200 acres comprising of**

i. 83 acres 19 guntas land already allotted to the company earlier for establishing Naphtha Based Power Plant at Sy. No: 41(P), 42/A(P), 42/2B, 43, 44/1A, 44/2(P), 44/3, 45(P), 49/1(P), 49/2, 50/1, 50/2(P), 50/3, 51/1, 51/1(P) & 52/1A of the Nalavagal Village, Ranebennur Taluk, Haveri District. The company is permitted to utilize this land for this Natural Gas Based Power Plant Project.

ii. In addition, 116 acres 21 guntas acres of land adjacent to the above land to be acquired by KIADB & allotted to the company as SUC".

The approval for the project is hereby extended by two (2) years from the date of this order. All other terms & conditions remain unaltered.

By Order and in the name of the Governor of Karnataka,

P.R. 1284

**A.V. SRINIVASA DIKSHIT**

Desk Officer (Technical Cell)

Commerce & Industries Department

## Infrastructure Development Secretariat

**Sub:** Provision of Rs. 1000.00 lakhs for investing in "Equity for PPP Project" under PPP frame work through in the Budget 2011-12 under the head of account 5465-01-190-1-15-132 (Plan) sanctions-reg.

**Preamble:**

A Sum of Rs. 1000 lakhs is provided in the budget for the year 2011-12 under the HoA 5465-01-1-15-132 under the name and style of the scheme as "Equity for PPP project ". This was proposed by IDD to FD during Pre- budget Meeting to provide for participation in the SPV's incorporated to deliver the Infrastructure projects under the PPP format Subsequently the Planning Commission and the guidelines issued by GoI impressed upon the State Govt. to stay away from the participation in the SPVs in the form of equity and ensure minimum interference in the administration of the SPVs and the JVs incorporated to deliver the infrastructure projects under the PPP format. The main reason has been to reduce the interference with the administration of the SPVs besides shielding the possible legal implication for non-compliance of the SPVs to the statutory /mandatory requirements in terms of safety, security, service delivery, quality of the services etc. This would be possible only if Govt stays as sitting Directors on the Boards of SPVs besides staying away as equity holders in the SPVs.

In a series of meeting held under chairmanship of PRS-IDD, this issue was deliberated and felt that the provision made available under the scheme of "Equity for PPP" projects under the head of account 5465-01-190-1-15-132 to an extent of the 1000 lakhs, be utilized to meet the financial requirement to:-

1. Meet the land acquisition cost required to make the land available to the developers to deliver the infrastructure projects.
2. Undertake the rehabilitation of displaced in the event of land acquisition, wherever required.
3. Meet the cost of shifting and relocation of the utilities.

The extent of each of the item of expenditure would be project specific and to be met to the extent of the actuals.

Since, there exist a scheme under the name and style KIPDF, where the expenditures of the above type be met out of KIPDF, it is felt that the provision made under the head of equity for PPP's be reappropriate to the KIPDFC.

Hence this order.

**GOVERNMENT ORDER NO.IDD 38 ITS 2011, BANGALORE DATED: 19th MAY, 2011**

After examining the issue in detail, sanction of the Govt. is accorded for reappropriation of the funds provided in the budget under the head of Account 5465-01-190-1-121-211 (Plan) to an extent of Rs. 1000.00 lakhs (one thousand lakhs) for the year 2011-12 to the head of account 5465-01-190-1-15-132 (Plan) KIPDF.

This order is issued with the concurrence of the Planning dept & Finance Department vide.their Note No. PD 11 FRD 2011 dtd: 19-04-2011 & FD 718 Exp.1/11 2011 dated 29-04-2011.

By Order and in the name of the Governor of Karnataka,

P.R. 1288

**R. SHIVALINGAIAH**

Under Secrtary to Govt., PPP Cell,

Infrastructure Development Department

## Infrastructure Development Secretariat

**Sub:** Release of funds towards cost sharing Railway projects-Kotturu-Harihar new broad gauge railway line project.

**Read:**
1. G.O.No. IDD 1 NSW 2002 dated. 22.03.02.
2. G.O.No.IDD 47 NSW 2003 (P) dated 26.03.2004.
3. G.O.No.IDD 51 NSW 2004 dated 19.07.2004.
4. G.O.No.IDD 98 NSW 2003 dated 21.10.2006.
5. G.O.No.IDD 98 NSW 2003 dated 20.12.2006.
6. G.O.No.IDD 98 NSW 2003 dated 5.09.2007.
7. G.O.No. IDD 15 NSW 2008 dated 22.10.08.
8. G.O.No.IDD 15 NSW 2008 dated 17.12.2008.
9. G.O.No.IDD 15 NSW 2008 dated 20.1.2009.

10. G.O.No.IDD 15 NSW 2008 dated 4.8.2009.
11. G.O.No.IDD 15 NSW 2008 dated 20.03.2010.
12. G.O.No.IDD 15 NSW 2008 dated 21.6.2010.
13. G.O.No.IDD 15 NSW 2008 dated 21.8.2010.
14. Letter No.W.63/CN/BNC/MR/B/GL dated 31.03.2011 of Chief Engineer, (Con) SWR, Bangalore.

**Preamble:**

In the Government Orders referred to at Sl. No.(1) to (13) above Government of Karnataka has so far released an amount of Rs.217.33 crore towards cost sharing for Kotturu-Harihar New railway line project.

2. The Chief Engineer, South Western Railway, Bangalore in his letter read at Sl.No.(14) above, has stated that there is a cost escalation and that the earlier cost of Rs. 304.65 crore is likely to increase to Rs. 326.00 crores and the share of Government of Karnataka will be Rs. 217.33 crores. Money deposited by Government of Karnataka so far is Rs. 217.33 crores. Hence, he has requested to deposit i.e Rs. 1.00 crore for residual work immediately towards Kotturu-Harihar new railway line project

3. The proposal of Railways has been examined and it has been decided to release an amount of Rs 1.00 crore out of the Budget of Rs.256.52 crore provided under the Head of Account “5465-01-190-3-05 (Plan) 211 investment” towards cost sharing for new railway projects during 2011-2012. Hence this order.

**GOVERNMENT ORDER NO. IDD 15 NSW 2008, BANGALORE DATED: 11th MAY, 2011**

After careful examination of the request of Railways, Government are pleased to release an amount of Rs.1.00 crore (Rupees One crore only) towards Kotturu-Harihar new railway line being the part of the balance 2/3rd share of Government of Karnataka and the above expenditure shall be met under the Head of Account ***“5465-01-190-3-05 (Plan) 211 investment”*** out of the budget provision Rs.256.52 crore. towards cost sharing for new railway projects during 2010-11.

2. The Chief Executive Officer, K-RIDE is authorized to draw the amount on a payee’s receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This order is issued in accordance with the delegation of powers to Principal Secretaries to Govt , vide G.O No. FD 1 TFP 2008 ,dt.16.05.2008.

By Order and in the name of the Governor of Karnataka,

P.R. 1289

**C.A. BABURAVINDRANATH PATEL**
Under Secrtary to Government,
Infrastructure Development Department

## Infrastructure Development Secretariat

**Sub:** Provision of Rs. 50.00 lakhs for development VADA project under PPP framework through MISP route in the Budget 2011-12 under the head of account 5465-01-190-1-19 (Plan) Vijayanagar Area Development Authority (VADA).

**Preamble:**

Govt. of Karnataka has recognised growth potential of Bellary region and has constituted a planning authority under the name and style VADA. iDeCK has been asked to prepare pre-feasibility report and the report, iDeCK has envisaged an investment of around Rs. 30,000 Crores as investment to be taken up in 3 phases. The SLSWA in its 7th meeting held on 19.04.2010 has accorded approval and authorised IDD to initiate action for engaging technical consultants for further studies. The concept note prepared in this regard envisaged Managed Infrastructure Support Partner model for implementation of VADA project.

The SLSWA in its 9th meeting held on 06.10.2010 has accorded approval in principle to take up implementation of VADA through MISP route, appoint KSIIDC as the nodal agency, iDecK as empanelled partner. M/s Vision Group Hubli have prepared broader land use plan and M/s CEPT, Ahmedabad were requested to prepare an integrated master plan of the VADA area. Hence, to meet out the pre project expenses such as transaction advisory services, project management consultant’s fee etc, provision during the financial year 2011-12 a Budget provision of Rs. 50.00 lakhs is provided, (under the Head of Account 5465-01-190-1-19 Vijayanagar Area Development Authority (VADA) investment).

Hence this order.

**GOVERNMENT ORDER NO.IDD 40 ITS 2011, BANGALORE DATED: 17th MAY, 2011**

After examining the proposal in detail, sanction of the Government is accorded for implementation of a new Scheme under the head of account 5465-01-190-1-19 (Plan) Vijayanagar Area Development Authority (VADA) investment with a budget

provision of Rs. 50.00 lakhs (Rupees Fifty Lakhs only) made in budget for the financial year 2011-12 to meet the project development and the project related expenses to cover all the expenditure to take the project for development and to select to a private sector partner as a Concessionaire.

This order is issued with the concurrence of the Planning and Finance Departments vide their U.O.Notes No. PD 19 FRO 2011 dated 19-04-2011 and FD 717 Exp-1/11 dated 28-04-2011 respectively.

By Order and in the name of the Governor of Karnataka,

**R. SHIVALINGAIAH**

Under Secrtary to Govt., PPP Cell,

Infrastructure Development Department

P.R. 1290

## Infrastructure Development Secretariat

**Sub:** Provision of budget allocation of Rs. 500.00 lakhs for the year 2011-12 under the head of account 5465-01-190-1-18 for the Tadadi Sea Port Project.

**Preamble:**

Karnataka Vision – 2020 aim of 9% industrial growth per annum emphasizes the felt need for development of infrastructure sectors viz Ports, Railways and Roads. A substantial portion of the iron-ore mined in the State is transported by Rail to the ports of Goa, Mangalore, Chennai etc in the neighbouring States. Karnataka is having maritime coast line of 300 kms with 10 minor ports viz Karwar, Belikere, Tadri, Honnavar, Bhatkal, Kundapur Hangaskatta, Malpe, Padubidri and Old Mangalore. The only major port is NMPT (New Mangalore Port Trust) in Mangalore has handled 36.02 million metric tonnes cargo during 2007-08. Considering the huge scope of development such as JSW, VADA, KPCL and ten special industrial zones, there is dire need for the development of port at Tadadi which forms ideal location as a natural harbour as it is situated in the estuary of Aghanashini river with large water front area and hinterland connectivity by Rail and Road. During the budget for the year 2011-12 under the head of Account 5465-01-190-1-18 Tadadi Sea port project which is a new Scheme has been sanctioned to IDD with a budget provision of Rs. 5.00 crores for meeting fees of consultants and project development expenses.

Hence this order.

**GOVERNMENT ORDER NO.IDD 41 ITS 2011, BANGALORE, DATED: 17th MAY, 2011**

After examining the proposal in detail, sanction of the Government is accorded for implementation of the new scheme under the head of account 5465-01-190-1-18 Tadadi Sea port project with budget provision of Rs. 5.00 crores (Rupees Five crores only) during the financial year 2011-12.

This order is issued with the concurrence of the Planning Department and Finance Department vide their U.O.Notes bearing No. PD 10 FRO 2011 dated 19-04-2011 and No. FD 713 Exp-1/11 dated 28-04-2011 respectively.

By Order and in the name of the Governor of Karnataka,

P.R. 1291

**R. SHIVALINGAIAH**

Under Secrtary to Govt., PPP Cell,

Infrastructure Development Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಬಿ. ಬಿಂದುರಾಣಿ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 688 ಹೆಚ್ಎಸ್ಹೆಚ್ 94 ದಿನಾಂಕ: 26–07–1997.

**2.** ಸರ್ಕಾರದ ಆದೇಶ ಸಂಖ್ಯೆ: ಆಕುಕ 492 ಹೆಚ್ಎಸ್ಹೆಚ್ 2000 ದಿನಾಂಕ: 12–10–2000.

**3.** ಆಯುಕ್ತರ ಪತ್ರ ಸಂಖ್ಯೆ: ಜೆಆರ್‌ಓ(3)/121/99–2000 ದಿನಾಂಕ: 27–01–2009.

**ಪ್ರಸ್ತಾವನೆ:**

ಡಾ: ಬಿ. ಬಿಂದುರಾಣಿ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 26–07–1997ರ ಪ್ರಕಾರ ಕರ್ನಾಟಕ ಲೋಕಸೇವಾ ಆಯೋಗದಿಂದ ಸರ್ಕಾರಿ ಸೇವೆಗೆ ನೇಮಕಗೊಂಡಿರುತ್ತಾರೆ. ಸದರಿಯವರು ಸರ್ಕಾರಿ ಸೇವೆಯಲ್ಲಿ ದಿನಾಂಕ: 01–12–2007 ರಿಂದ 28–02–1998 ರವರೆಗೆ ಹೆರಿಗೆ ರಜೆ ಮೇಲೆ ತೆರಳಿ ನಂತರ ಅನಧಿಕೃತ

ಗೈರುಹಾಜರಾಗಿರುತ್ತಾರೆ. ಸದರಿಯವರಿಗೆ ಶಿಸ್ತುಕ್ರಮ ಬಾಕಿ ಇರಿಸಿ ಸಾರ್ವಜನಿಕ ಆಸ್ಪತ್ರೆ, ತೀರ್ಥಹಳ್ಳಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ. ನೇಮಕಾತಿ ಸ್ಥಳದಲ್ಲಿ ವರದಿ ಮಾಡಿಕೊಂಡು ತದನಂತರ ದಿನಾಂಕ: 28–08–1999 ರಂದು 29–08–1999 ರಿಂದ 07–09–1999 ರವರೆಗೆ ದೂರವಾಣಿಯ ಮೂಲಕ ರಜೆ ಕೋರಿ ರಜೆಯ ಮೇಲೆ ಹೋಗಿದ್ದು, ರಜೆ ಅವಧಿ ಮುಗಿದ ನಂತರ ದಿನಾಂಕ: 08–09–1999 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ಸದರಿ ವೈದ್ಯಾಧಿಕಾರಿಯವರು ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಿಯಾಗಿ ಉಳಿದಿರುತ್ತಾರೆ. ಸದರಿಯವರಿಗೆ ಕರ್ತವ್ಯಕ್ಕೆ ಮರಳಿ ಹಾಜರಾಗುವಂತೆ ದಿನಾಂಕ: 29–10–1999 ಹಾಗೂ 23–08–2000 ರಲ್ಲಿ ಕರೆ ಪತ್ರವನ್ನು ಕಳುಹಿಸಿದಾಗ್ಯೂ ಸರ್ಕಾರಿ ಸೇವೆಗೆ ಹಾಜರಾಗಿರುವುದಿಲ್ಲ. ಸದರಿಯವರನ್ನು ಅನಧಿಕೃತ ಗೈರುಹಾಜರಿಯಾದ್ದರಿಂದ ಮೇಲೆ (2) ರಲ್ಲಿ ಓದಲಾದ ದಿನಾಂಕ: 12–10–2000ರ ಸರ್ಕಾರದ ಆದೇಶದ ರೀತ್ಯ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ. ಆದಾಗ್ಯೂ ಸದರಿ ವೈದ್ಯಾಧಿಕಾರಿಯವರು ಸರ್ಕಾರಿ ಸೇವೆಗೆ ಪದೇಪದೇ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಮತ್ತು ಸರ್ಕಾರದ ಮರುಕರೆ ನೋಟೀಸುಗಳಿಗೆ ಸ್ಪಂದಿಸದೇ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಗಳ ನಿಯಮ 5 (1) (ಬಿ)ರ ಅನ್ವಯ ಸದರಿ ವೈದ್ಯಾಧಿಕಾರಿಯವರ ಪರಿವೀಕ್ಷಣಾ ಸೇವೆಯು ತೃಪ್ತಿಕರ ಇಲ್ಲದೇ ಇರುವುದರಿಂದ ಅವರು ಹೊಂದಿರುವ ವೈದ್ಯಾಧಿಕಾರಿ ಹುದ್ದೆಗೆ ತಕ್ಕುದಾರರಲ್ಲದವರೆಂದು ಮತ್ತು ಸೂಕ್ತರಾದವರಲ್ಲವೆಂದು ಪರಿಗಣಿಸಬೇಕಾಗುತ್ತದೆ ಹಾಗೂ ಸದರಿ ವೈದ್ಯಾಧಿಕಾರಿಯವರ ಪರಿವೀಕ್ಷಣಾ ಅವಧಿಯಲ್ಲಿ ಅವರ ಸೇವೆಯು ತೃಪ್ತಿಕರ ಇಲ್ಲದೇ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಾವಳಿಗಳ ನಿಯಮ 6 (2)ರಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸರ್ಕಾರವು ಅದರಂತೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಕುಕ 43 ಎಂಎಸ್ಎ 2009, ಬೆಂಗಳೂರು, ದಿನಾಂಕ: 17ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ: ಬಿ. ಬಿಂದುರಾಣಿ, ಮಹಿಳಾ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ತೃಪ್ತಿಕರ ಸೇವೆಯನ್ನು ಸಲ್ಲಿಸದೇ ಇರುವುದರಿಂದ ಮತ್ತು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಗಳ ನಿಯಮ 5(1)(ಬಿ) ರ ಅನ್ವಯ ಸದರಿ ವೈದ್ಯಾಧಿಕಾರಿಯವರ ಪರಿವೀಕ್ಷಣಾ ಸೇವೆಯು ತೃಪ್ತಿಕರ ಇಲ್ಲದೇ ಇರುವುದರಿಂದ ಅವರು ಹೊಂದಿರುವ ಹುದ್ದೆಗೆ ತಕ್ಕುದಾರರಲ್ಲದಿರುವುದರಿಂದ ಮತ್ತು ಸೂಕ್ತರಾದವರಲ್ಲದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಾವಳಿಗಳ ನಿಯಮ 6(1) ಮತ್ತು (2)ರ ಅನ್ವಯ ಸದರಿಯವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಫ್. ಹುಬ್ಬಳ್ಳಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1292

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಯಶವಂತಪುರ ವಿಧಾನ ಸಭಾ ಕ್ಷೇತ್ರದ ಜಾಗೃತ ಸಮಿತಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವ ಕುರಿತು.

**ಉಲ್ಲೇಖ: 1.** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 16/ಯೋಉಮಾ/2010 ದಿನಾಂಕ: 18–01–2010.

**2.** ಮಾನ್ಯ ಇಂಧನ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಚಿವರ ನಡವಳಿ ಸಂಖ್ಯೆ: ಇ.ಆ.ನಾ.ಸ.ಗ್ರಾ.ವ್ಯ.ಸ./1257/2011 ದಿನಾಂಕ: 15–3–2011.

**ಪ್ರಸ್ತಾವನೆ:**

ಪಂಚಾಯತ್ ರಾಜ್ ಸಂಸ್ಥೆಗಳಿಂದ ಅನುಷ್ಠಾನಗೊಳ್ಳುತ್ತಿರುವ ಸರ್ಕಾರದ ಕಾರ್ಯಕ್ರಮಗಳ ಪರಿಶೀಲನೆ ಮಾಡಲು ಉಲ್ಲೇಖ (1)ರ ಆದೇಶದ ಮೂಲಕ ವಿಧಾನ ಸಭಾ ಕ್ಷೇತ್ರವಾರು ಜಾಗೃತ ಸಮಿತಿಯನ್ನು ರಚಿಸಲಾಗಿದೆ. ಯಶವಂತಪುರ ವಿಧಾನಸಭಾ ಕ್ಷೇತ್ರವಾರು ಜಾಗೃತ ಸಮಿತಿಗೆ ಹಾಲಿ ಅಧ್ಯಕ್ಷರಾದ ಸ್ಥಳೀಯ ಶಾಸಕರು ಹಾಗೂ ಇಂಧನ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಮಾನ್ಯ ಸಚಿವರು ಉಲ್ಲೇಖ (2)ರ ನಡವಳಿಯಲ್ಲಿ ಸದರಿಯವರಿಗೆ ಕಾರ್ಯ ಒತ್ತಡವಿರುವುದರಿಂದ ಅವರ ಬದಲಿಗೆ ಶ್ರೀ ಜಿ. ವಿಜಯಕುಮಾರ್ ಬಿನ್ ಎಂ. ಗುಂಡಪ್ಪ, ಉದಯಪುರ ಗ್ರಾಮ, ಉದಯಪುರ ಅಂಚೆ, ಬೆಂಗಳೂರು–82 ಇವರನ್ನು ಸದರಿ ಸಮಿತಿಗೆ ಅಧ್ಯಕ್ಷರನ್ನಾಗಿ ನಾಮನಿರ್ದೇಶನ ಮಾಡಲು ಕೋರಿರುತ್ತಾರೆ ಹಾಗೂ ಸನ್ಮಾನ್ಯ ಮುಖ್ಯಮಂತ್ರಿಯವರು ಈ ಕೋರಿಕೆಯನ್ನು ಅನುಮೋದಿಸಿರುತ್ತಾರೆ. ಯಶವಂತಪುರ ವಿಧಾನಸಭಾ ಕ್ಷೇತ್ರದ ಜಾಗೃತ ಸಮಿತಿಗೆ ಬದಲಿ ಅಧ್ಯಕ್ಷರನ್ನು ನಾಮನಿರ್ದೇಶಿಸಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 152 ಜಿಪಸ 2011, ಬೆಂಗಳೂರು, ದಿನಾಂಕ: 12ನೇ ಮೇ, 2011**

ಉಲ್ಲೇಖ (1)ರ ಆದೇಶದ ಮೂಲಕ ರಚಿಸಲಾಗಿದ್ದ ವಿಧಾನಸಭಾ ಕ್ಷೇತ್ರವಾರು ಜಾಗೃತ ಸಮಿತಿಗೆ ಸಂಬಂಧಿಸಿದಂತೆ ಯಶವಂತಪುರ ವಿಧಾನಸಭಾ ಕ್ಷೇತ್ರದ ಜಾಗೃತ ಸಮಿತಿಗೆ ಸ್ಥಳೀಯ ಶಾಸಕರ ಬದಲಿಗೆ ಶ್ರೀ ಜಿ. ವಿಜಯಕುಮಾರ್ ಬಿನ್. ಎಂ. ಗುಂಡಪ್ಪ, ಉದಯಪುರ ಗ್ರಾಮ, ಉದಯಪುರ ಅಂಚೆ, ಬೆಂಗಳೂರು–82 ಇವರನ್ನು ಅಧ್ಯಕ್ಷರನ್ನಾಗಿ ನಾಮನಿರ್ದೇಶಿಸಲಾಗಿದೆ. ಸದರಿ ಆದೇಶವು ತಕ್ಷಣದಿಂದ ಅನ್ವಯಿಸಲಿದ್ದು, ಹಾಲಿ ಯಶವಂತಪುರ ವಿಧಾನಸಭಾ ಕ್ಷೇತ್ರದ ಶಾಸಕರ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಎಂ.ಆರ್. ಏಕಾಂತಪ್ಪ**

ನಿರ್ದೇಶಕರು (ಪಂಚಾಯತ್ ರಾಜ್) ಮತ್ತು

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1293

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2010-11ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಉಳಿಕೆ ಅನುದಾನವನ್ನು 2011-12ನೇ ಸಾಲಿನ ರಾಜ್ಯದ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-18014 /01/ : 2010-11 ಡಿಆರ್‌ಡಿಎ (ಎಸ್‌ಎಲ್ ನಂ.10) ದಿನಾಂಕ 17-05-2010
2) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ : 03-08-2010 ಮತ್ತು ದಿನಾಂಕ 17-08-2010,
3) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ಎಸ್‌ಎಲ್ ನಂ.34) ದಿನಾಂಕ 15-07-2010
4) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.III) (ಎಸ್‌ಎಲ್ ನಂ.101) ದಿನಾಂಕ 02-02-2011
5) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.I) (ಎಸ್‌ಎಲ್ ನಂ.106) ದಿನಾಂಕ 03-02-2011
6) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.II) (ಎಸ್‌ಎಲ್ ನಂ.107) ದಿನಾಂಕ 04-02-2011
7) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.I) (ಎಸ್‌ಎಲ್ ನಂ.139) ದಿನಾಂಕ 28-02-2011
8) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.III) (ಎಸ್‌ಎಲ್ ನಂ.141) ದಿನಾಂಕ 03-03-2011
9) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್- 17014 /10/ : 2010-11 ಡಿಆರ್‌ಡಿಎ (ವಾಲ್ಯೂಂ.II) (ಎಸ್‌ಎಲ್ ನಂ.147) ದಿನಾಂಕ 03-03-2011
10) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 14-03-2011, ತಿದ್ದುಪಡಿ ದಿನಾಂಕ 18-03-2011 ಮತ್ತು ದಿನಾಂಕ 25-03-2011
11) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/10/ : 2010-11 ಡಿಆರ್‌ಡಿಎ (ವಾಲ್ಯೂಂ.I) (ಎಸ್‌ಎಲ್ ನಂ.158) ದಿನಾಂಕ 10-03-2011
12) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/40/ : 2010-11 ಡಿಆರ್‌ಡಿಎ (ಎಸ್‌ಎಲ್ ನಂ.197) ದಿನಾಂಕ 30-03-2011

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತದೆ. 2010-11ನೇ ಸಾಲಿಗೆ ಕೇಂದ್ರ ಸರ್ಕಾರ ರಾಜ್ಯದ ಎಲ್ಲಾ 30 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ ಕೇಂದ್ರ ಸರ್ಕಾರದ ಪತ್ರಗಳಲ್ಲಿ ₹ 18,23,65,000 ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ₹ 6,07,88,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು.

2010-11 ನೇ ಸಾಲಿನ ವರ್ಷಾಂತ್ಯದಲ್ಲಿ ಕೇಂದ್ರ ಸರ್ಕಾರವು ಓದಲಾಗಿದೆ (12) ರ ಪತ್ರದಲ್ಲಿ ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಯೋಜನೆಯಡಿ ಹೆಚ್ಚುವರಿಯಾಗಿ ₹ 5,77,69,000ಗಳನ್ನು ಬಿಡುಗಡೆ ಮಾಡಿದೆ. ಆದ ಕಾರಣ, ರಾಜ್ಯದ ಪಾಲಿನ ಅನುದಾನ ₹ 1,98,25,000 ನ್ನು 2011-12 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ : 03ನೇ ಮೇ, 2011.**

**ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2010-11 ನೇ ಸಾಲಿನ ಉಳಿಕೆ ಅನುದಾನವನ್ನು 2011-12 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ₹ 1,98,25,000 ಗಳನ್ನು (₹ ಒಂದು ಕೋಟಿ ತೊಂಬತ್ತೆಂಟು ಲಕ್ಷದ ಇಪ್ಪತ್ತೈದು ಸಾವಿರ ಮಾತ್ರ) ಅನುಬಂಧದಲ್ಲಿ ತೋರಿಸಿದಂತೆ 30 ಜಿಲ್ಲಾ ಪಂಚಾಯತಿಗಳಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.**

***ಷರತ್ತುಗಳು :***

**ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜನಾಧಿಕಾರಿಗಳು ಅನುಮತಿ ನೀಡತಕ್ಕದ್ದು.**

**ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-6-ಜಿಲ್ಲಾ ಪಂಚಾಯತ್-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ- (ಕೇಂದ್ರ ಪುರಸ್ಕೃತ ಯೋಜನೆ) 2011-2012 ಲಿಂಕ್ ಕೋಡ್ 2515-00-196-6-06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515-00-101-0-01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007**

**(ಪಿ2) ದಿನಾಂಕ 26-04-2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ-1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ-6) ಯ ಸಂಖ್ಯೆ ಆಇ 172 ವೆಚ್ಚ-6/2011 ದಿನಾಂಕ 30-03-2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.**

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5 ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

**ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 39 ಪಿಬಿಎಸ್ 2011 ದಿನಾಂಕ:26-04-2011ರಂತೆ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಎ.ಮೇಘಣ್ಣವರ**
ನಿರ್ದೇಶಕರು (ಸ್ವಉಕಾ),
ಹಾಗೂ ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 03-05-2011**

(ರೂ. ಗಳಲ್ಲಿ)

| ಕ್ರ. ಸಂ | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2010-11 ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಅಡಿ ಕೇಂದ್ರ ಸರ್ಕಾರ ಬಿಡುಗಡೆ ಒಟ್ಟು ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿದ್ದ ಅನುದಾನ | 2010-11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ಅನುದಾನದಂತೆ ಈಗಾಗಲೇ ಬಿಡುಗಡೆ ಮಾಡಿದ ಅನುದಾನ | 2010-11 ನೇ ಸಾಲಿನ ಬಾಕಿ ಅನುದಾನವನ್ನು 2011-12 ನೇ ಸಾಲಿನಲ್ಲಿ ಭರಿಸಿ ಬಿಡುಗಡೆ ಮಾಡಬೇಕಾದ ಅನುದಾನ | 2011-12 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ನಿಗದಿ ಪಡಿಸಿದ ಅನುದಾನ | ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬಾಗಲಕೋಟೆ | 461 | 2900ZZ0001 | 70,84,000 | 23,61,000 | 16,04,000 | 7,57,000 | 32,00,000 | 7,57,000 |
| 2 | ಬೆಂಗಳೂರು ನಗರ | 401 | 0100ZZ8001 | 69,41,000 | 23,14,000 | 17,03,000 | 6,11,000 | 31,00,000 | 6,11,000 |
| 3 | ಬೆಂಗಳೂರು (ಗ್ರಾ) | 402 | 0300ZZ8001 | 60,52,000 | 20,17,000 | 14,07,000 | 6,10,000 | 37,61,000 | 6,10,000 |
| 4 | ಬೆಳಗಾಂ | 413 | 2200ZZ0002 | 67,53,000 | 22,51,000 | 14,94,000 | 7,57,000 | 41,60,000 | 7,57,000 |
| 5 | ಬಳ್ಳಾರಿ | 418 | 3400ZZ0001 | 76,83,000 | 25,61,000 | 18,04,000 | 7,57,000 | 31,00,000 | 7,57,000 |
| 6 | ಬೀದರ್ | 419 | 3800ZZ5701 | 61,75,000 | 20,58,000 | 14,47,000 | 6,11,000 | 28,50,000 | 6,11,000 |
| 7 | ಬಿಜಾಪುರ | 414 | 2800ZZ9152 | 45,44,000 | 15,15,000 | 9,04,000 | 6,11,000 | 34,00,000 | 6,11,000 |
| 8 | ಚಾಮರಾಜನಗರ | 456 | 1000ZZ0001 | 50,92,000 | 16,97,000 | 10,87,000 | 6,10,000 | 26,75,000 | 6,10,000 |
| 9 | ಚಿಕ್ಕಮಗಳೂರು | 408 | 1800ZZ0017 | 33,58,000 | 11,19,000 | 11,19,000 | 0 | 27,25,000 | 0 |
| 10 | ಚಿಕ್ಕಬಳ್ಳಾಪುರ | 453 | 0600ZZ0001 | 56,29,000 | 18,76,000 | 11,19,000 | 7,57,000 | 16,50,000 | 7,57,000 |

| | | | | | | | | | |
|---|---|---|---|---|---|---|---|---|---|
| 11 | ಚಿತ್ರದುರ್ಗ | 403 | 1600ZZ0001 | 83,05,000 | 27,68,000 | 20,11,000 | 7,57,000 | 32,00,000 | 7,57,000 |
| 12 | ದಾವಣಗೆರೆ | 451 | 1700ZZ0002 | 56,29,000 | 18,76,000 | 11,19,000 | 7,57,000 | 43,75,000 | 7,57,000 |
| 13 | ದಕ್ಷಿಣ ಕನ್ನಡ | 409 | 1900ZZ0047 | 61,09,000 | 20,36,000 | 14,26,000 | 6,10,000 | 23,90,000 | 6,10,000 |
| 14 | ಧಾರವಾಡ | 415 | 2500ZZ8798 | 53,58,000 | 17,86,000 | 11,75,000 | 6,11,000 | 34,50,000 | 6,11,000 |
| 15 | ಗದಗ್ | 462 | 2600ZZ0001 | 47,92,000 | 15,97,000 | 9,87,000 | 6,10,000 | 25,00,000 | 6,10,000 |
| 16 | ಗುಲ್ಬರ್ಗಾ | 417 | 3200ZZ0003 | 56,29,000 | 18,76,000 | 11,19,000 | 7,57,000 | 37,00,000 | 7,57,000 |
| 17 | ಹಾಸನ | 410 | 1300ZZ0003 | 77,97,000 | 25,99,000 | 15,54,000 | 10,45,000 | 21,25,000 | 10,45,000 |
| 18 | ಹಾವೇರಿ | 463 | 2700ZZ0001 | 71,96,000 | 23,99,000 | 16,41,000 | 7,58,000 | 25,00,000 | 7,58,000 |
| 19 | ಕೊಡಗು | 411 | 1200ZZ0001 | 50,45,000 | 16,82,000 | 10,71,000 | 6,11,000 | 24,00,000 | 6,11,000 |
| 20 | ಕೋಲಾರ | 404 | 0700ZZ8002 | 45,44,000 | 15,15,000 | 9,04,000 | 6,11,000 | 20,27,000 | 6,11,000 |
| 21 | ಕೊಪ್ಪಳ | 466 | 1500ZZ0010 | 45,44,000 | 15,15,000 | 9,04,000 | 6,11,000 | 18,75,000 | 6,11,000 |
| 22 | ಮಂಡ್ಯ | 412 | 1100ZZ0001 | 85,58,000 | 28,53,000 | 18,15,000 | 10,38,000 | 36,00,000 | 10,38,000 |
| 23 | ಮೈಸೂರು | 407 | 0900ZZ0001 | 86,32,000 | 28,77,000 | 21,20,000 | 7,57,000 | 31,00,000 | 7,57,000 |
| 24 | ರಾಯಚೂರು | 420 | 3600ZZ0001 | 61,86,000 | 20,62,000 | 14,51,000 | 6,11,000 | 30,00,000 | 6,11,000 |
| 25 | ರಾಮನಗರ | 452 | 0400ZZ0001 | 54,06,000 | 18,02,000 | 11,91,000 | 6,11,000 | 25,45,000 | 6,11,000 |
| 26 | ಶಿವಮೊಗ್ಗ | 405 | 1400ZZ0002 | 66,56,000 | 22,19,000 | 14,61,000 | 7,58,000 | 25,00,000 | 7,58,000 |
| 27 | ತುಮಕೂರು | 406 | 0800ZZ0001 | 76,42,000 | 25,47,000 | 17,90,000 | 7,57,000 | 41,25,000 | 7,57,000 |
| 28 | ಉಡುಪಿ | 457 | 2000ZZ0001 | 53,36,000 | 17,79,000 | 11,67,000 | 6,12,000 | 21,00,000 | 6,12,000 |
| 29 | ಉತ್ತರ ಕನ್ನಡ | 416 | 3000ZZ0080 | 69,80,000 | 23,27,000 | 14,66,000 | 8,61,000 | 18,00,000 | 8,61,000 |
| 30 | ಯಾದಗಿರಿ | 421 | 3300ZZ0001 | 27,10,000 | 9,03,000 | 9,03,000 | 0 | 28,00,000 | 0 |
| | | | | 18,23,65,000 | 6,07,88,000 | 4,09,63,000 | 1,98,25,000 | 8,64,33,000 | 1,98,25,000 |

**ಪಿ.ಎ.ಮೇಘಣ್ಣವರ**
ನಿರ್ದೇಶಕರು (ಸ್ವಉಕಾ),
ಹಾಗೂ ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1294

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ಎಸ್‌ಜಿಎಸ್‌ವೈಯಡಿ 17 ಜಿಲ್ಲಾ ಪಂಚಾಯತಿಗಳಿಗೆ 2010–11 ನೇ ಸಾಲಿನ ರಾಜ್ಯದ ಪಾಲಿನ ಉಳಿಕೆ ಅನುದಾನವನ್ನು 2011–12 ನೇ ಸಾಲಿನ ರಾಜ್ಯದ ಆಯವ್ಯಯದಿಂದ ಭರಿಸಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : **1.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/1/2010 ಎಸ್‌ಜಿಎಸ್‌ವೈ–I (9) ದಿನಾಂಕ : 04–05–10 ಮತ್ತು (38) ದಿನಾಂಕ : 18–06–10.

**2.** ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 04–08–2010.

**3.** ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 56 ಬಿಆರ್‌ಎಸ್ 2010 ದಿನಾಂಕ 29–09–10.

**4.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/2/2010 ಎಸ್‌ಜಿಎಸ್‌ವೈ–I (88) ದಿನಾಂಕ : 18–11–2010.

**5.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2010 ಎಸ್‌ಜಿಎಸ್‌ವೈ–I (158) ದಿನಾಂಕ : 24–12–2010.

**6.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/04/2010 ಎಸ್‌ಜಿಎಸ್‌ವೈ–I (175) ದಿನಾಂಕ : 06–01–2011.

**7.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/5/2010 ಎಸ್‌ಜಿಎಸ್‌ವೈ–I (185) ದಿನಾಂಕ : 19–01–2011.

**8.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/06/2010 ಎಸ್‌ಜಿಎಸ್‌ವೈ–I (197) ದಿನಾಂಕ : 27–01–2011.

**9.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/07/2010 ಎಸ್‌ಜಿಎಸ್‌ವೈ–I (206) ದಿನಾಂಕ : 28–01–2011.

**10.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/08/2010 ಎಸ್‌ಜಿಎಸ್‌ವೈ–I (227) ದಿನಾಂಕ : 25–02–2011.

**11.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/09/2010 ಎಸ್‌ಜಿಎಸ್‌ವೈ–I (226) ದಿನಾಂಕ : 25–02–2011.

**12.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/10/2010 ಎಸ್‌ಜಿಎಸ್‌ವೈ–I (235) ದಿನಾಂಕ : 28–02–2011.

**13.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/06/2010 ಎಸ್‌ಜಿಎಸ್‌ವೈ–I (234) ದಿನಾಂಕ : 28–02–2011.

**14.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/10/2010 ಎಸ್‌ಜಿಎಸ್‌ವೈ–I (251) ದಿನಾಂಕ : 07–03–2011.

**15.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/07/2010 ಎಸ್‌ಜಿಎಸ್‌ವೈ–I (252) ದಿನಾಂಕ : 07–03–2011.

**16.** ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 04–01–2011, 24–02–2011, 14–03–2011 ಮತ್ತು 29–03–2011

**17.** ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 426 ಬಿಆರ್‌ಎಸ್ 2010 ದಿನಾಂಕ 24–03–11.

**18.** ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ–20011/1/2011–ಎಸ್‌ಜಿಎಸ್‌ವೈ–I (303) ದಿನಾಂಕ : 30–03–2011.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (1), (4) ರಿಂದ (15) ಮತ್ತು (18) ರ ಪತ್ರಗಳಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯಡಿ 2010–11 ನೇ ಸಾಲಿಗೆ ರಾಜ್ಯಕ್ಕೆ ಒಟ್ಟು ಅನುದಾನ ₹ 93,69,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ ₹ 31,23,17,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ, 2010–11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ಯಡಿ ಜಿಲ್ಲಾ ಪಂಚಾಯತಿಗಳಿಗೆ ಕಾಯ್ದಿರಿಸಿದ ರಾಜ್ಯದ ಪಾಲಿನ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಓದಲಾಗಿದೆ (2) ಮತ್ತು (16) ರ ಸರ್ಕಾರದ ಆದೇಶಗಳಲ್ಲಿ ಒಟ್ಟು ₹ 24,68,26,000 ಗಳನ್ನು ಬಿಡುಗಡೆ ಮಾಡಲಾಗಿತ್ತು.

ಆದರೆ, 17 ಜಿಲ್ಲಾ ಪಂಚಾಯತಿಗಳಾದ ಬೆಂಗಳೂರು ನಗರ, ಬೀದರ್, ಬಿಜಾಪುರ, ಚಾಮರಾಜನಗರ, ಚಿಕ್ಕಮಗಳೂರು, ಚಿಕ್ಕಬಳ್ಳಾಪುರ, ದಾವಣಗೆರೆ, ಗದಗ್, ಗುಲ್ಬರ್ಗಾ, ಹಾಸನ, ಕೊಡಗು, ಕೋಲಾರ, ಮಂಡ್ಯ, ಶಿವಮೊಗ್ಗ, ತುಮಕೂರು, ಉಡುಪಿ ಮತ್ತು ಯಾದಗಿರಿ ಗೆ 2010–11 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಒಟ್ಟು ₹ 59,78,03,000 ಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ₹ 19,92,68,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ ಈ ಜಿಲ್ಲಾ ಪಂಚಾಯತಿಗಳಿಗೆ 2010–11 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಕಾಯ್ದಿರಿಸಿದ ಅನುದಾನದ ಲಭ್ಯತೆಗನುಸಾರವಾಗಿ ₹ 13,37,75,000 ಗಳನ್ನು ಮಾತ್ರ ಬಿಡುಗಡೆಗೊಳಿಸಲಾಗಿತ್ತು. ಉಳಿಕೆ ₹ 6,54,93,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಈ ಅನುದಾನವನ್ನು, 2011–12 ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ಯಡಿ ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳಿಗೆ ಕಾಯ್ದಿರಿಸಿದ ರಾಜ್ಯದ ಪಾಲಿನ ಅನುದಾನದಿಂದ ಭರಿಸಿ ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 03ನೇ ಮೇ, 2011**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2010–11 ನೇ ಸಾಲಿನ ಬಾಕಿ ಅನುದಾನವನ್ನು, 2011–12 ನೇ ಸಾಲಿನ ರಾಜ್ಯದ ಪಾಲಿನ ಅನುದಾನದಿಂದ ಭರಿಸಿ ಒಟ್ಟು ₹ 6,54,93,000 (ಆರುಕೋಟಿ ಐವತ್ತನಾಲ್ಕು ಲಕ್ಷದ ತೊಂಬತ್ತಮೂರು ಸಾವಿರ ₹ ಮಾತ್ರ )ಗಳನ್ನು ಅನುಬಂಧದಲ್ಲಿ ತೋರಿಸಿರುವ 17 ಜಿಲ್ಲಾ ಪಂಚಾಯತಿಗಳಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು :**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011–2012 ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜೆವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011–12 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 35 ಪಿಬಿಎಸ್ 2011 ದಿನಾಂಕ 26–04–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಎ.ಮೇಘಣ್ಣವರ**
ನಿರ್ದೇಶಕರು (ಸ್ವಉಕಾ), ಹಾಗೂ
ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 03–05–2011 ಕ್ಕೆ ಅನುಬಂಧ

(₹ .ಗಳಲ್ಲಿ)

| ಕ್ರ. ಸಂ | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2010–11 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಒಟ್ಟು ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾಗಿದ್ದ ಅನುದಾನ | 2010–11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ಅನುದಾನದಂತೆ ಈಗಾಗಲೇ ಬಿಡುಗಡೆ ಮಾಡಿದ ಅನುದಾನ | 2010–11 ನೇ ಸಾಲಿನ ರಾಜ್ಯದ ಪಾಲಿನ ಬಾಕಿ ಅನುದಾನವನ್ನು 2011–12 ನೇ ಸಾಲಿನ ಆಯವ್ಯಯ ದಿಂದ ಭರಿಸಿ ಬಿಡುಗಡೆ ಮಾಡಬೇಕಾದ ಅನುದಾನ | 2011–12 ನೇ ಸಾಲಿನ ರಾಜ್ಯದ ಆಯವ್ಯಯ ದಲ್ಲಿ ಜಿಲ್ಲೆಗಳಿಗೆ ನಿಗದಿ ಪಡಿಸಿದ ಅನುದಾನ | ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬೆಂಗಳೂರು ನಗರ | 401 | 0100ZZ8001 | 1,24,32,000 | 41,44,000 | 29,47,000 | 11,97,000 | 32,00,000 | 11,97,000 |
| 2 | ಬೀದರ್ | 419 | 3800ZZ5701 | 4,38,41,000 | 1,46,14,000 | 89,86,000 | 56,28,000 | 94,09,000 | 56,28,000 |
| 3 | ಬಿಜಾಪುರ | 414 | 2800ZZ9152 | 4,32,26,000 | 1,44,09,000 | 1,01,24,000 | 42,85,000 | 1,23,00,000 | 42,85,000 |
| 4 | ಚಾಮರಾಜನಗರ | 456 | 1000ZZ0001 | 6,25,57,000 | 2,08,52,000 | 1,50,21,000 | 58,31,000 | 90,00,000 | 58,31,000 |
| 5 | ಚಿಕ್ಕಮಗಳೂರು | 408 | 1800ZZ0017 | 1,84,82,000 | 61,61,000 | 51,81,000 | 9,80,000 | 61,00,000 | 9,80,000 |
| 6 | ಚಿಕ್ಕಬಳ್ಳಾಪುರ | 453 | 0600ZZ0001 | 2,39,93,000 | 79,98,000 | 64,58,000 | 15,40,000 | 35,00,000 | 15,40,000 |
| 7 | ದಾವಣಗೆರೆ | 451 | 1700ZZ0002 | 4,16,10,000 | 1,38,70,000 | 88,20,000 | 50,50,000 | 75,00,000 | 50,50,000 |
| 8 | ಗದಗ್ | 462 | 2600ZZ0001 | 3,97,06,000 | 1,32,35,000 | 94,76,000 | 37,59,000 | 84,32,000 | 37,59,000 |
| 9 | ಗುಲ್ಬರ್ಗಾ | 417 | 3200ZZ0003 | 3,60,60,000 | 1,20,20,000 | 86,94,000 | 33,26,000 | 1,02,00,000 | 33,26,000 |
| 10 | ಹಾಸನ | 410 | 1300ZZ0003 | 3,76,08,000 | 1,25,36,000 | 60,75,000 | 64,61,000 | 70,00,000 | 64,61,000 |
| 11 | ಕೊಡಗು | 411 | 1200ZZ0001 | 69,25,000 | 23,08,000 | 13,44,000 | 9,64,000 | 21,00,000 | 9,64,000 |
| 12 | ಕೋಲಾರ | 404 | 0700ZZ8002 | 2,77,97,000 | 92,66,000 | 58,05,000 | 34,61,000 | 40,00,000 | 34,61,000 |
| 13 | ಮಂಡ್ಯ | 412 | 1100ZZ0001 | 4,31,83,000 | 1,43,94,000 | 92,88,000 | 51,06,000 | 1,00,00,000 | 51,06,000 |
| 14 | ಶಿವಮೊಗ್ಗ | 405 | 1400ZZ0002 | 3,76,56,000 | 1,25,52,000 | 1,07,94,000 | 17,58,000 | 1,06,00,000 | 17,58,000 |
| 15 | ತುಮಕೂರು | 406 | 0800ZZ0001 | 7,68,57,000 | 2,56,19,000 | 1,38,39,000 | 1,17,80,000 | 1,50,00,000 | 1,17,80,000 |
| 16 | ಉಡುಪಿ | 457 | 2000ZZ0001 | 2,26,09,000 | 75,36,000 | 54,54,000 | 20,82,000 | 40,00,000 | 20,82,000 |
| 17 | ಯಾದಗಿರಿ | 421 | 3300ZZ0001 | 2,32,61,000 | 77,54,000 | 54,69,000 | 22,85,000 | 50,00,000 | 22,85,000 |
| | | | | 59,78,03,000 | 19,92,68,000 | 13,37,75,000 | 6,54,93,000 | 12,73,41,000 | 6,54,93,000 |

**ಪಿ.ಎ.ಮೇಘಣ್ಣವರ**
ನಿರ್ದೇಶಕರು (ಸ್ವಉಕಾ),
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1295

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೇತರ ಹುದ್ದೆಗಳನ್ನು ದಿನಾಂಕ 1–4–2011 ರಿಂದ 31–3–2012ರವರೆಗೆ ಮುಂದುವರಿಸುವ ಬಗ್ಗೆ

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 60 ಕೆಎಂಯು 2010, ದಿನಾಂಕ 15.06.2010

**2.** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಇಎಸ್‌ಟಿ:1:ಕ.ಸಂ.6:2011–12, ದಿ: 15.04.2011

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೇತರ 26 ಹುದ್ದೆಗಳು ಹಾಗೂ ಕಮಿಟೆಡ್ ಯೋಜನೇತರ 7 ಹುದ್ದೆಗಳು ಸೇರಿದಂತೆ ಒಟ್ಟು 33 ಹುದ್ದೆಗಳನ್ನು ದಿನಾಂಕ 01.04.2010 ರಿಂದ ದಿನಾಂಕ 31–3–2011ರವರೆಗೆ ಒಂದು ವರ್ಷದ ಅವಧಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರೆಸಿ ಆದೇಶಿಸಲಾಗಿತ್ತು.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಹಾಗೂ ಕಮಿಟೆಡ್ ಯೋಜನೇತರ 7 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳ ಮುಂದುವರಿಕೆ ಆದೇಶವು ದಿನಾಂಕ 31.3.2011ಕ್ಕೆ ಅಂತ್ಯಗೊಳ್ಳಲಿದೆ ಎಂದು ತಿಳಿಸಿ, ಕಮಿಟೆಡ್ ಯೋಜನೇತರ 7 ಹುದ್ದೆಗಳು ಹಾಗೂ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ದಿನಾಂಕ 1.4.2011 ರಿಂದ 31.3.2012ರವರೆಗಿನ ಅವಧಿಗೆ ಮುಂದುವರಿಸಿ ಅಧಿಕಾರಿ ಹಾಗೂ ಸಿಬ್ಬಂದಿಗಳ ವೇತನ ಪಾವತಿಸಲು ಅನುವಾಗುವಂತೆ ಚೆಕ್ ಲಿಸ್ಟ್‌ನ್ನು ಲಗತ್ತಿಸಿ ಮುಂದುವರಿಕೆ ಆದೇಶವನ್ನು ಶೀಘ್ರವಾಗಿ ಹೊರಡಿಸಲು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 97 ಕೆಎಂಯು 2011, ಬೆಂಗಳೂರು, ದಿನಾಂಕ: 16ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಈ ಕೆಳಕಂಡ ಒಟ್ಟು 33 ಹುದ್ದೆಗಳನ್ನು ದಿನಾಂಕ 1–4–2011 ರಿಂದ 31–3–2012 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

1. ಲೆಕ್ಕಶೀರ್ಷಿಕೆ 2205–00–103–0–01 (ಕಮಿಟೆಡ್ ನಾನ್‌ಪ್ಲಾನ್)
   1. ಉಪನಿರ್ದೇಶಕರು – 1
   2. ಪುರಾತತ್ವ ಸಹಾಯಕರು – 2
   3. ಅಟೆಂಡರ್ – 1

   4 ಹುದ್ದೆಗಳು
2. ಲೆಕ್ಕಶೀರ್ಷಿಕೆ 2205–00–107–0–01 (ಕಮಿಟೆಡ್ ನಾನ್‌ಪ್ಲಾನ್)
   1. ಕ್ಯೂರೇಟರ್ – 3 ಹುದ್ದೆಗಳು

   ಒಟ್ಟು ಕಮಿಟೆಡ್ ನಾನ್‌ಪ್ಲಾನ್ 7 ಹುದ್ದೆಗಳು
3. ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) (ತಾತ್ಕಾಲಿಕ)
   1. ಸಹಾಯಕ ನಿರ್ದೇಶಕರು (ವಸ್ತುಸಂಗ್ರಹಾಲಯಗಳ ಅಭಿವೃದ್ಧಿ) – 1
   2. ಪುರಾತತ್ವ ಸಹಾಯಕರು – 1
   3. ಮಾನ್ಯೂಮೆಂಟ್ಸ್ ಅಟೆಂಡೆಂಟ್ಸ್ – 5

   7 ಹುದ್ದೆಗಳು
4. ಲೆಕ್ಕಶೀರ್ಷಿಕೆ 2205–00–107–0–01 (ಯೋಜನೇತರ) (ತಾತ್ಕಾಲಿಕ)
   1. ಕ್ಯೂರೇಟರ್ – 2
   2. ದ್ವಿತೀಯ ದರ್ಜೆ ಸಹಾಯಕರು – 5
   3. ಅಟೆಂಡರ್ – 1
   4. ಗ್ರೂಪ್–ಡಿ – 8
   5. ಪ್ಯೂನ್ – 2
   6. ರಾತ್ರಿ ಕಾವಲುಗಾರ – 1

   19 ಹುದ್ದೆಗಳು

   ಒಟ್ಟು ಯೋಜನೇತರ (ತಾತ್ಕಾಲಿಕ) 26 ಹುದ್ದೆಗಳು

**ಘೋಷ್ವಾರೆ**

| | | |
|---|---|---|
| 1) ಕಮಿಟೆಡ್ ಯೋಜನೇತರ ಹುದ್ದೆಗಳು | – | 7 |
| 2) ತಾತ್ಕಾಲಿಕ ಯೋಜನೇತರ ಹುದ್ದೆಗಳು | – | 26 |
| | | ----- |
| ಒಟ್ಟು ಹುದ್ದೆಗಳು | | 33 |
| | | ----- |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ವಿ.ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ) (ಪ್ರ)

ಪಿ.ಆರ್. 1296

## ಸಹಕಾರ ಸಚಿವಾಲಯ

**ವಿಷಯ:** ಮದ್ದೂರು ಟೌನ್ ಕ್ಲಬ್, ಮದ್ದೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಸಇ 120 ಸಿಎಸ್‌ಆರ್ 2009, ಬೆಂಗಳೂರು, ದಿನಾಂಕ: 15–02–2010.

**2.** ರಿಟ್ ಅರ್ಜಿ ಸಂಖ್ಯೆ: 6413/2010 ಮದ್ದೂರು ಟೌನ್ ಕ್ಲಬ್ ವಿರುದ್ಧ ರಾಜ್ಯ ಸರ್ಕಾರ.

**3.** ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/102/ಎಸ್‌ಓಆರ್/ 2009–10, ದಿನಾಂಕ: 11–04–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 15–2–2010ರ ಆದೇಶದಲ್ಲಿ ಮದ್ದೂರು ಟೌನ್ ಕ್ಲಬ್, ಮದ್ದೂರು ಈ ಸಂಘದ ಒಡೆತನದಲ್ಲಿ ವಾಣಿಜ್ಯ ಮಳಿಗೆಗಳಿದ್ದು, ಇವುಗಳಿಂದ ಬರುವ ಸಾವಿರಾರು ರೂಪಾಯಿ ಬಾಡಿಗೆಯನ್ನು ದುರುಪಯೋಗವಾಗುವ ಸಾಧ್ಯತೆ ಇರುವುದರಿಂದ ಹಣ ದುರುಪಯೋಗ ತಡೆಯಲು ಹಾಗೂ ಚುನಾವಣೆಯ ಮೂಲಕ ಹೊಸ ಪದಾಧಿಕಾರಿಗಳನ್ನು ನೇಮಿಸಬೇಕಾಗಿರುವುದರಿಂದ ಈ ಸಂಸ್ಥೆಯ ಹಿತದೃಷ್ಟಿಯಿಂದ ಈ ಸಂಘಕ್ಕೆ ಕರ್ನಾಟಕ ಸಂಘಗಳ, ನೋಂದಣಿ ಕಾಯ್ದೆ 1960ರ ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಸದರಿ ಆದೇಶವನ್ನು ಮದ್ದೂರು ಟೌನ್ ಕ್ಲಬ್‌ನ ಕಾರ್ಯದರ್ಶಿಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲೆ ಓದಲಾದ (2)ರಲ್ಲಿ ರಿಟ್ ಅರ್ಜಿ ಸಂಖ್ಯೆ: 6413/2010ನ್ನು ದಾಖಲಿಸಿ ತಡೆಯಾಜ್ಞೆಯನ್ನು ಪಡೆದಿದ್ದು, ಸದರಿ ಪ್ರಕರಣವನ್ನು ಮಾನ್ಯ ನ್ಯಾಯಾಲಯವು ಅಂತಿಮವಾಗಿ ದಿನಾಂಕ: 11–11–2010ರಂದು ಇತ್ಯರ್ಥ ಪಡಿಸಿದ ತೀರ್ಪಿನಲ್ಲಿ ದಿನಾಂಕ: 15–02–2010ರ ಆದೇಶದಲ್ಲಿ ಸರ್ಕಾರವು ನೇಮಿಸಿದ ಆಡಳಿತಾಧಿಕಾರಿಗಳ ಅವಧಿಯು ಮುಕ್ತಾಯವಾಗಿರುವುದರಿಂದ ಪ್ರಕರಣವನ್ನು ವಜಾಗೊಳಿಸಿರುತ್ತದೆ. ಅಂದರೆ ಆಡಳಿತಾಧಿಕಾರಿಗಳು ಅಧಿಕಾರವನ್ನು ವಹಿಸಿಕೊಳ್ಳುವ ಮುನ್ನವೇ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಿದ್ದರಿಂದ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿರುವುದಿಲ್ಲ.

ಮೇಲೆ ಓದಲಾದ (3)ರ ದಿನಾಂಕ: 11–04–2011ರ ಪತ್ರದಲ್ಲಿ ಮದ್ದೂರು ಟೌನ್ ಕ್ಲಬ್ ಮದ್ದೂರು ಸಂಘದ ಕಾರ್ಯನಿರ್ವಹಣೆ ಕುರಿತು ಸಹಕಾರ ಸಂಘಗಳ ಉಪ ನಿಬಂಧಕರು, ಮಂಡ್ಯ ರವರು ಸಲ್ಲಿಸಿರುವ ವರದಿಯಲ್ಲಿ ಈ ಕೆಳಕಂಡಂತೆ ಲೋಪಗಳು ಮುಂದುವರೆದಿರುವುದರಿಂದ.

1. ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11 ಮತ್ತು 12 ರನ್ವಯ ಸದರಿ ಸಂಸ್ಥೆಯು ದಾಖಲೆಗಳನ್ನು ನಿರ್ವಹಿಸಲು ವಿಫಲರಾಗಿರುತ್ತಾರೆ.
2. ಸದರಿ ಕ್ಲಬ್‌ನ ಒಡೆತನದಲ್ಲಿರುವ ಅಂಗಡಿ ಮಳಿಗೆಗಳಿಂದ ಬರುವ ಬಡಿಗೆ ಹಣ ದುರುಪಯೋಗವಾಗುತ್ತಿದೆ.
3. ಸದರಿ ಕ್ಲಬ್‌ನಲ್ಲಿ ಆಡಳಿತ ಮಂಡಳಿಯು ಸಂಘದ ನಿಬಂಧನೆಗಳನ್ನು ಅನುಸರಿಸದೆ ನಿಯಮ ಬಾಹಿರವಾಗಿ ಕಾರ್ಯ ನಿರ್ವಹಿಸುತ್ತಿರುತ್ತದೆ.
4. ಸದರಿ ಕ್ಲಬ್‌ನ ವಿರುದ್ಧ ಈ ಹಿಂದೆ ಮಾಡಲಾಗಿದ್ದ ಆರೋಪಗಳು ಇಂದಿಗೂ ಮುಂದುವರಿಸಲಾಗಿರುತ್ತದೆ.

ಮೇಲ್ಕಂಡ ಅಂಶಗಳ ಆಧಾರದ ಮೇಲೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ಮತ್ತು 27(ಎ)(ಸಿ) ರನ್ವಯ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಮಂಡ್ಯ ರವರು ಅಭಿಪ್ರಾಯ ಪಟ್ಟಿರುವುದರಿಂದ ಮೇಲ್ಕಂಡ ಕ್ಲಬ್‌ಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)(ಸಿ) ರನ್ವಯ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 35 ನ್ಯಾದಾಅ 2010, ಬೆಂಗಳೂರು, ದಿನಾಂಕ: 13ನೇ ಮೇ, 2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮದ್ದೂರು ಟೌನ್ ಕ್ಲಬ್, ಮದ್ದೂರು ಈ ಸಂಘದ ಒಡೆತನದಲ್ಲಿ ವಾಣಿಜ್ಯ ಮಳಿಗೆಗಳಿದ್ದು, ಇವುಗಳಿಂದ ಬರುವ ಸಾವಿರಾರು ರೂಪಾಯಿ ಬಾಡಿಗೆಯನ್ನು ದುರುಪಯೋಗವಾಗುವ ಸಾಧ್ಯತೆ ಇರುವುದರಿಂದ ಹಣ ದುರುಪಯೋಗ ತಡೆಯಲು ಹಾಗೂ ಚುನಾವಣೆಯ ಮೂಲಕ ಹೊಸ ಪದಾಧಿಕಾರಿಗಳನ್ನು ನೇಮಿಸಬೇಕಾಗಿರುವುದರಿಂದ ಈ ಸಂಸ್ಥೆಯ ಹಿತದೃಷ್ಟಿಯಿಂದ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಡ್ಯ ಜಿಲ್ಲೆ, ಮಂಡ್ಯ ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು (6) ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

ಸದರಿ ಅವಧಿಯಲ್ಲಿ ಆಡಳಿತಾಧಿಕಾರಿಗಳು ಸಂಘದಲ್ಲಿ ಹಾಲಿ ನೋಂದಾಯಿತವಾಗಿರುವ ಸದಸ್ಯರುಗಳಿಂದ ಚುನಾವಣೆ ನಡೆಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1297

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಚ್. ಮಂಜುನಾಥಬಾಬು, ಪೊಲೀಸ್ ಇನ್ಸ್‌ಪೆಕ್ಟರ್, ವಿವೇಕನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ(2)ಸಿಓಪಿ/92/ 2009 ದಿ: 03–7–09
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)/50/2009 ದಿನಾಂಕ: 18–11–09.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 17–01–10
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/50/ 2009–10 ದಿನಾಂಕ: 12–4–2010
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 110 ಸಿಎನ್‌ಎಸ್ 10 ದಿನಾಂಕ: 03–5–2011

**ಪ್ರಸ್ತಾವನೆ:**

ಶ್ರೀ ಎಚ್. ಮಂಜುನಾಥಬಾಬು, ಪೊಲೀಸ್ ಇನ್ಸ್‌ಪೆಕ್ಟರ್, ಇವರು ಈ ಹಿಂದೆ ತಿರುಮಣಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತನ ಬೇಜವಾಬ್ದಾರಿತನ ಎಸಗಿರುವ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿಯಲ್ಲಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿರುತ್ತದೆ.

**ದೋಷಾರೋಪಣೆ:**

"ಶ್ರೀ ಮಂಜುನಾಥಬಾಬು, ಪೊಲೀಸ್ ಇನ್ಸ್‌ಪೆಕ್ಟರ್, ವಿವೇಕನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಈ ಹಿಂದೆ ತಿರುಮಣಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಠಾಣಾ ಮೊ.ಸಂ: 26/06 ಕಲಂ 302–201 ಐ.ಪಿ.ಸಿ. ಪ್ರಕರಣದ ಪ್ರತಿಶತ 80 ಭಾಗದಷ್ಟು ತನಿಖೆಯನ್ನು ನೀವು ಮಾಡಿದ್ದು, ಪ್ರಕರಣವು ಘೋರತರದ್ದಾಗಿದ್ದು, ತನಿಖಾಧಿಕಾರಿಗಳಾಗಿದ್ದ ನೀವು ಪ್ರಕರಣ ದಿನಚರಿಗಳನ್ನು ಸ್ವತ: ಬರೆಯದೇ ಯಾರೋ ಬರೆದ ಪ್ರಕರಣ ದಿನಚರಿಗೆ ಸಹಿ ಮಾಡಿರುವುದು ಕಂಡು ಬಂದಿರುತ್ತದೆ. ಸದರಿ ಪ್ರಕರಣದಲ್ಲಿ ರಕ್ತ ಸಂಬಂಧಿಗಳ ಹೇಳಿಕೆಗಳನ್ನು ಮಾಡಲಾಗಿದ್ದು, ಹೇಳಿಕೆ ರೀತ್ಯಾ ಮೃತ ಸಾಕಲ ಶಂಕರನನ್ನು ಆತನ ಹೆಂಡತಿ ನಾರಾಯಣಮ್ಮ ಹಾಗೂ ಗುನ್ನಾಲಕ್ಷ್ಮೀನಾರಾಯಣ ಸೇರಿ ಕೊಲೆ ಮಾಡಿರುವ ಬಗ್ಗೆ ನಿಖರವಾದ ಸಾಕ್ಷ್ಯಗಳು ಸಂಗ್ರಹಿಸಿದ್ದರೂ ಸಹ ಅದಕ್ಕೆ ಪೂರಕವಾದ ಸಾಕ್ಷ್ಯಗಳನ್ನು ಸಂಗ್ರಹಿಸಿರುವುದಿಲ್ಲ. ಗುಮಾನಿ ಆಸಾಮಿಗಳ ಬಗ್ಗೆ ಸ್ಪಷ್ಟ ಮಾಹಿತಿ ಇದ್ದರೂ ಸಹ, ತನಿಖಾಧಿಕಾರಿಗಳಾದ ನೀವು ಸ್ವತ: ಸ್ಥಳಕ್ಕೆ ಭೇಟಿ ನೀಡಿ, ಆರೋಪಿಗಳನ್ನು ದಸ್ತಗಿರಿ ಮಾಡದೆ ಅಧೀನ ಸಿಬ್ಬಂದಿಗಳಿಗೆ ಜ್ಞಾಪನ ನೀಡುವ ಮೂಲಕ ಕರ್ತವ್ಯದಲ್ಲಿ ತೀವ್ರ ಜವಾಬ್ದಾರಿತನ ತೋರಿರುತ್ತೀರಿ. ಗುಮಾನಿ ಆಸಾಮಿಗಳು ಕೃತ್ಯ ನಡೆದ ನಂತರ ಆಂಧ್ರಪ್ರದೇಶದ ಹಲವಾರು ಪ್ರದೇಶಗಳಲ್ಲಿ ವಾಸಿಸುತ್ತಿದ್ದರು, ಎಂಬ ಬಗ್ಗೆ ಸ್ಪಷ್ಟ ಮಾಹಿತಿ ಇದ್ದರೂ ಸಹ, ಎಲ್ಲಿ ವಾಸವಾಗಿದ್ದರು, ಜೀವನ ನಿರ್ವಹಣೆ ಯಾವ ರೀತಿ ನಡೆಸುತ್ತಿದ್ದರು, ಅವರ ಸಹಚರರು ಯಾರು ಇತ್ಯಾದಿ ಯಾವುದೇ ಸಾಕ್ಷ್ಯಗಳನ್ನು ಸಂಗ್ರಹಿಸದೆ ನೀವು ಕರ್ತವ್ಯದಲ್ಲಿ ಉದಾಸೀನತೆಯನ್ನು ತೋರಿರುತ್ತೀರಿ. ಗುಮಾನಿ ಆಸಾಮಿಗಳು ಮೊಬೈಲ್ ಹೊಂದಿದ್ದರೆ? ಅದರ ಸಂಖ್ಯೆ ಏನು? ಗುಮಾನಿ ಆಸಾಮಿಗಳು ಮೊಬೈಲ್‌ನಿಂದ ಯಾವ ಟವರ್ ವ್ಯಾಪ್ತಿಯಲ್ಲಿ ಸಂಭಾಷಣಾ ನಿರತರಾಗಿದ್ದಾರೆ? ಈ ನಿಟ್ಟಿನಲ್ಲಿ ಆರೋಪಿಗಳ ಪತ್ತೆ ಮಾಡಬಹುದಾಗಿದ್ದು, ತನಿಖೆಯನ್ನು ಕಾಟಾಚಾರಕ್ಕೆ ಮಾಡಿದಂತೆ ಕಂಡು ಬಂದಿರುತ್ತದೆ ಗುಮಾನಿ ಆಸಾಮಿ ಗುನ್ನ ಲಕ್ಷ್ಮೀನಾರಾಯಣ ಮಾವ ಬಸಪ್ಪ ಈತನು ವಿಚಾರಣಾ ಸಮಯದಲ್ಲಿ ತನ್ನ ಅಳಿಯ ಕೃತ್ಯ ನಡೆದ ನಂತರ ಕಾಣೆಯಾದ ಬಗ್ಗೆ ಮಾಹಿತಿ ನೀಡಿದ್ದು, ಕಾಣೆಯಾಗಿರುವ ಬಗ್ಗೆ ಅನಂತಪುರ ಹಾಗೂ ರಾಮಗಿರಿ ಠಾಣೆಯಲ್ಲಿ ದೂರು ನೀಡುತ್ತೇನೆ ಎಂದು ತಿಳಿಸಿದ್ದು, ತನಿಖಾಧಿಕಾರಿಗಳಾದ ನೀವು ತದನಂತರ ಬಸಪ್ಪ ಸದರಿ ಠಾಣೆಗಳಲ್ಲಿ ದೂರು ದಾಖಲಿಸಿರುತ್ತಾನೆಯೇ? ಇಲ್ಲವೇ ಇಲ್ಲದಿದ್ದರೆ ಗುಮಾನಿ ಆಸಾಮಿಗಳ

ಬಗ್ಗೆ ಆತನಿಗೆ ಖಚಿತ ಮಾಹಿತಿ ಇರಬಹುದು ಎಂದು ಭಾವಿಸಿ ಆತನನ್ನು ತೀವ್ರತರವಾದ ವಿಚಾರಣೆಗೆ ಒಳಪಡಿಸಿ ಗುಮಾನಿ ಆಸಾಮಿಗಳ ಬಗ್ಗೆ ಮಾಹಿತಿ ಸಂಗ್ರಹಿಸಬಹುದಾಗಿತ್ತು. ಈ ನಿಟ್ಟಿನಲ್ಲಿ ಸಮರ್ಪಕವಾಗಿ ತನಿಖೆ ಮಾಡುವಲ್ಲಿ ವಿಫಲರಾಗಿರುತ್ತೀರಿ.

ಪ್ರಕರಣದ ತನಿಖೆಯು ಎರಡೂವರೆ ವರ್ಷಗಳಾಗಿದ್ದರೂ ಸಹ, ನಿಯಮಾವಳಿ ರೀತ್ಯಾ ತನಿಖೆ ಮುಂದುವರೆಸಲು ಕಾಲಕಾಲಕ್ಕೆ ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೆ ಕಾಟಾಚಾರಕ್ಕೆ ಎಂಬಂತೆ ಒಂದೆರಡು ಸಾರಿ ಹಿರಿಯ ಅಧಿಕಾರಿಗಳ ಅನುಮತಿಗಾಗಿ ಮನವಿ ಸಲ್ಲಿಸಿ ನಿಮ್ಮ ಕರ್ತವ್ಯದಲ್ಲಿ ಅತ್ಯಂತ ಉದಾಸೀನತೆಯಿಂದ ಗುಮಾನಿ ಆಸಾಮಿಗಳ ಪತ್ತೆಗಾಗಿ ನಕ್ಸಲ್ ನಿಗ್ರಹ ದಳದ ಸಿಬ್ಬಂದಿಗಳಾದ ಸಿ.ಪಿ.ಸಿ. 638, ಸಿ.ಪಿ.ಸಿ. 46, ಸಿ.ಪಿ.ಸಿ. 415 ಮತ್ತು ಸಿ.ಪಿ.ಸಿ. 871 ರವರುಗಳನ್ನು ನೇಮಕ ಮಾಡಿರುತ್ತೀರಿ. ಆದರೆ ನಕ್ಸಲ್ ನಿಗ್ರಹ ದಳದ ಸಿಬ್ಬಂದಿ ನೇಮಿಸಲು ಹಿರಿಯ ಅಧಿಕಾರಿಗಳಿಗೆ ಮಾಹಿತಿ ತಿಳಿಸಿ ಅನುಮತಿ ಪಡೆದಿದ್ದರೆ? ಈ ಬಗ್ಗೆ ಯಾವುದೇ ಮಾಹಿತಿಯನ್ನು ಸಹ ತನಿಖಾಧಿಕಾರಿಗಳಾದ ನೀವು ತನಿಖೆಯನ್ನು ನಿಮಗೆ ಇಚ್ಛೆ ಬಂದಂತೆ ಅತ್ಯಂತ ಉದ್ಧಟತನದಿಂದ ನಿರ್ವಹಿಸಿರುವುದು ಕಂಡುಬಂದಿರುತ್ತದೆ. ಗುಮಾನಿ ಆಸಾಮಿಗಳ ಬಗೆಗಿನ ವಿವರಗಳು, ಅವರ ಚಹರೆ ಇತ್ಯಾದಿ ಯಾವುದನ್ನೂ ಸಂಗ್ರಹಿಸಿ ತನಿಖೆಯಲ್ಲಿ ಅಳವಡಿಸಿಕೊಳ್ಳದೆ ಅತ್ಯಂತ ಬೇಜವಾಬ್ದಾರಿತನವನ್ನು ತೋರಿರುತ್ತೀರಿ. ತನಿಖಾ ಉದ್ದಕ್ಕೂ ಸಹ ಕೇವಲ ಗುಮಾನಿ ಆಸಾಮಿಗಳನ್ನು ಪತ್ತೆ ಮಾಡುವಲ್ಲಿ ಮಾತ್ರ ನಿಗಾವಹಿಸಿದ್ದು, ಸದರಿ ಕೃತ್ಯವನ್ನು ಬೇರೆ ಯಾರಾದರೂ ಇತರೆ ಯಾವುದಾದರೂ ಕಾರಣಕ್ಕೆ ಸದರಿ ಕೃತ್ಯವನ್ನು ನಡೆಸಿರಬಹುದೇ ಎಂಬ ಬಗ್ಗೆ ಕಿಂಚತ್ತೂ ಯೋಚಿಸದೆ ಆ ನಿಟ್ಟಿನಲ್ಲಿ ತನಿಖೆಯನ್ನು ಮುಂದುವರೆಸದೆ, ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ. ಉದಾಸೀನತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವನ್ನು ಎಸಗಿರುವುದು ಕಂಡುಬಂದಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 03-7-09ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18-11-09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 21 ಪೊಸಿಅ 2010 ಬೆಂಗಳೂರು, ದಿನಾಂಕ: 16ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್. ಮಂಜುನಾಥಬಾಬು, ಪೊಲೀಸ್ ಇನ್ಸ್‌ಪೆಕ್ಟರ್, ವಿವೇಕನಗರ ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 03-7-2009ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶ: ಮಾರ್ಪಡಿಸಿ "ವಾಗ್ದಂಡನೆ"ಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1298

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ. ಸವಣೂರು ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಡಿಇ/82/ಉವ/ 2009 ದಿ: 26-10-2009
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)/58/2009-10 (ಓ.ಬಿ. 67/2009-10) ದಿನಾಂಕ: 08-3-2010
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 15-6-2010
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/32/2010-11 ದಿನಾಂಕ: 06-10-2010

**ಪ್ರಸ್ತಾವನೆ:**

ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ. ಸವಣೂರು ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಗುತ್ತಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ನೀವು ಈ ಹಿಂದೆ ಗುತ್ತಲ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ., ಅಂತಾ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಗ ದಿನಾಂಕ: 04–1–08 ರಂದು ಬೆಳಿಗ್ಗೆ ಡಿ.ಎಸ್.ಪಿ., ಹಾವೇರಿ ಉಪ ವಿಭಾಗ ರವರ ಕಚೇರಿಗೆ ಬಂದ ಅನಾಮದೇಯ ದೂರವಾಣಿ ಕರೆಯಲ್ಲಿ ನೀವು ಗುತ್ತಲ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಬರುವ ಮ್ಯಾಂಗನೀಸ್ ಲಾರಿಗಳನ್ನು ಅನಧಿಕೃತವಾಗಿ ನಿಲ್ಲಿಸಿ, ಅವರುಗಳಿಂದ ಹಣ ವಸೂಲಿ ಮಾಡುತ್ತಿರುವ ಬಗ್ಗೆ ತಿಳಿಸಿದ್ದು ಅದರಂತೆ ಡಿ.ಎಸ್.ಪಿ. ರವರು ಸಿಪಿಐ ಗ್ರಾಮೀಣ ವೃತ್ತ, ಪಿಐ ಶಹರ ಠಾಣೆ ಮತ್ತು ಸಿಬ್ಬಂದಿ ರವರುಗಳೊಂದಿಗೆ ಘಟನಾ ಸ್ಥಳಕ್ಕೆ ಬಂದು ಪರಿಶೀಲಿಸಿ ನೀವು ಮ್ಯಾಂಗನೀಸ್ ಲಾರಿ ಚಾಲಕರುಗಳಿಂದ ಹಣ ಸಂಗ್ರಹಿಸುತ್ತಿದ್ದು, ಡಿ.ಎಸ್.ಪಿ. ಹಾವೇರಿ ಉಪ ವಿಭಾಗ ರವರು ಬರುವ ವಿಷಯ ತಿಳಿದು ಕೂಡಲೇ ನೀವು ಸ್ಥಳದಿಂದ ಗುತ್ತಲಕ್ಕೆ ಹೋಗಿರುತ್ತೀರಿ. ಈ ಬಗ್ಗೆ ಡಿ.ಎಸ್.ಪಿ.ರವರು ನಿಂತ ಲಾರಿ ಚಾಲಕರುಗಳನ್ನು ವಿಚಾರಿಸಿದ್ದರಲ್ಲಿ ನೀವು ಅವರುಗಳಿಂದ ಹಣ ವಸೂಲಿ ಮಾಡುತ್ತಿರುವ ಬಗ್ಗೆ ಹೇಳಿಕೆ ನೀಡಿ, ನೀವು ಪ್ರತಿ ಟ್ರಿಪ್‌ಗೆ ಲಾರಿ ಚಾಲಕರುಗಳಿಂದ ಹಣ ಪಡೆಯುತ್ತೀರಿ ಎಂಬುವ ಬಗ್ಗೆ ತಿಳಿಸಿರುತ್ತಾರೆ. ನೀವು ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ಮ್ಯಾಂಗನೀಸ್ ಲಾರಿ ಚಾಲಕರುಗಳಿಂದ ಅನಧಿಕೃತವಾಗಿ ಹಣ ಪಡೆದು ನಿಮ್ಮ ಜವಾಬ್ದಾರಿಯುತ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ವರದಿ ನೀಡಿದ್ದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 26–10–09ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮುಂದೂಡಲಾಗಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08–3–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 102 ಪೊಸಿಅ 2010 ಬೆಂಗಳೂರು, ದಿನಾಂಕ: 09ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ. ಸವಣೂರು ಪೊಲೀಸ್ ಠಾಣೆ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1299

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಗೋಕಾಕ್ ತಾಲ್ಲೂಕಿನ ಮಮದಾಪೂರ ಗ್ರಾಮದ ಹತ್ತಿರ ಕಣವಿ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು.

**ಓದಲಾಗಿದೆ: 1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/2106 ದಿನಾಂಕ 18.04.2011

**2.** ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(1) ದಿನಾಂಕ 24/02/2010.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಗೋಕಾಕ್ ತಾಲ್ಲೂಕಿನ ಮಮದಾಪೂರ ಗ್ರಾಮದ ಹತ್ತಿರ ಕಣವಿ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03.11.2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 02.11.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 11.11.2010 |
| ವಿಜಯ ಕರ್ನಾಟಕ ದಿನಪತ್ರಿಕೆ | 09.11.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 30.12.2010 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,38,95,319/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,63,14,199 /- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಜೈಶೀಲ ನಾರಾಯಣ ಶೆಟ್ಟಿ, ಪ್ರಥಮ ದರ್ಜೆ ಗುತ್ತಿಗೆದಾರರು | 2,01,72,494/- | 45.17 ಹೆಚ್ಚು | 23.65 ಹೆಚ್ಚು |

ಮೇಲ್ಕಂಡಂತೆ ಶ್ರೀ ಜೈಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 23.65ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 23.04.2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.9.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,63,14,199/-ಗಳ ಮೇಲೆ ಶೇ. **7.50**ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,75,37,764/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ: 10ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಗೋಕಾಕ್ ತಾಲ್ಲೂಕಿನ ಮಮದಾಪೂರ ಗ್ರಾಮದ ಹತ್ತಿರ ಕಣವಿ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,63,14,199/-ಗಳ ಮೇಲೆ ಶೇ. **7.50**ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,75,37,764/- ಗಳಿಗೆ (ರೂ. ಒಂದು ಕೋಟಿ ಎಪ್ಪತ್ತೈದು ಲಕ್ಷ ಮೂವತ್ತೇಳು ಸಾವಿರದ ಏಳುನೂರ ಅರವತ್ತನಾಲ್ಕು) ಶ್ರೀ ಜೈಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1300

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನ ಹಿರೇವಡ್ಡಟ್ಟಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು.

**ಓದಲಾಗಿದೆ: 1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–3/2011–12/2206 ದಿನಾಂಕ 23.04.2011

**2.** ಸರ್ಕಾರದ ಆದೇಶ ಸಂಖ್ಯೆ ಸನೀಇ 236 ಮಸಾವಿ 2009(9) ದಿನಾಂಕ 09/07/2010

**ಪ್ರಸ್ತಾವನೆ:**

ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನ ಹಿರೇವಡ್ಡಟ್ಟಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18.11.2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 22.11.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 18.11.2010 |
| ವಿಜಯ ಕರ್ನಾಟಕ ದಿನಪತ್ರಿಕೆ | 17.11.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 22.01.2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,55,74,623/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,02,18,581/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಜಿ.ಗೋಕುಲ ಶೆಟ್ಟಿ, ಪ್ರಥಮ ದರ್ಜೆ ಗುತ್ತಿಗೆದಾರರು | 2,31,12,444/– | 48.40 ಹೆಚ್ಚು | 14.31 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ.ಗೋಕುಲ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.31ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,02,18,581/-ಗಳ ಮೇಲೆ ಶೇ.7.50ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 2,17,34,975/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 38 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ: 10ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನ ಹಿರೇವಡ್ಡಟ್ಟಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,02,18,581/-ಗಳ ಮೇಲೆ ಶೇ.7.50ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 2,17,34,975/- ಗಳಿಗೆ (ರೂ. ಎರಡು ಕೋಟಿ ಹದಿನೇಳು ಲಕ್ಷ ಮೂವತ್ತನಾಲ್ಕು ಸಾವಿರದ ಒಂಭೈನೂರ ಎಪ್ಪತ್ತೈದು) ಶ್ರೀ ಜಿ. ಗೋಕುಲ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1301

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ರಾಯಚೂರ ಜಿಲ್ಲೆ ದೇವದುರ್ಗ ತಾಲ್ಲೂಕಿನ ಗಣಜಲಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು.

**ಓದಲಾಗಿದೆ: 1.** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ/ತಾಸ–3/ಸ.ಇಂ.–7/ಗಣಜಲಿ/2010–11/1848 ದಿನಾಂಕ 31.03.2011.

**2.** ಸರ್ಕಾರದ ಆದೇಶ ಸಂಖ್ಯೆ ಸನೀಇ 06 ನಯೋಕಾ 2009 ದಿನಾಂಕ 06.01.2010.

**ಪ್ರಸ್ತಾವನೆ:**

ರಾಯಚೂರ ಜಿಲ್ಲೆ ದೇವದುರ್ಗ ತಾಲ್ಲೂಕಿನ ಗಣಜಲಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಎರಡನೇ ಬಾರಿಗೆ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 29.11.2010 |
| ಕರ್ನಾಟಕ ರಾಜ್ಯ ಪತ್ರ | 02.12.2010 |
| ವಿಜಯ ಕರ್ನಾಟಕ ದಿನಪತ್ರಿಕೆ | 05.12.2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ಕು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 15.02.2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,00,92,268/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ.1,26,53,466 /- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಅಶೋಕ ಬಳ್ಳೊಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು | 1,50,42,952/– | 49.05 ಹೆಚ್ಚು | 18.88 ಹೆಚ್ಚು |

ಮೇಲ್ಕಂಡಂತೆ ಶ್ರೀ ಅಶೋಕ ಬಳ್ಳೊಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.88ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 28.03.2011ರಂದು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ.14.50 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,26,53,466 /-ಗಳ ಮೇಲೆ ಶೇ. **6.50**ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,34,75,941/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 25 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ: 10ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರ ಜಿಲ್ಲೆ ದೇವದುರ್ಗ ತಾಲ್ಲೂಕಿನ ಗಣಜಲಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,26,53,466 /-ಗಳ ಮೇಲೆ ಶೇ. **6.50**ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,34,75,941/- ಗಳಿಗೆ (ರೂ. ಒಂದು ಕೋಟಿ ಮೂವತ್ತನಾಲ್ಕು ಲಕ್ಷ ಎಪ್ಪತ್ತೈದು ಸಾವಿರದ ಒಂಭೈನೂರ ನಲವತ್ತೊಂದು) ಶ್ರೀ ಅಶೋಕ ಬಳ್ಳೊಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1302

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ನೀವರಗಿ ಗ್ರಾಮದ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅನುಮೋದಿಸುವ ಕುರಿತು

**ಓದಲಾಗಿದೆ: 1.** ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ನೀವರಗಿ ಸೇ.ಸ.ಬ್ಯಾರೇಜ/2011–12/2271 ದಿನಾಂಕ 26.04.2011

**2.** ಸರ್ಕಾರದ ಆದೇಶ ಸಂಖ್ಯೆ ಸನೀಇ 10 ನಯೋಕಾ 2010 ದಿನಾಂಕ 27.11.2010.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ನೀವರಗಿ ಗ್ರಾಮದ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬಿಜಾಪುರದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 27.01.2011 |
| ಪ್ರಜಾವಾಣಿ ದಿನಪತ್ರಿಕೆ | 23.11.2011 |
| ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆ | 23.01.2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಐದು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಮೂವರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 25.02.2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.3,71,09,851/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.3,67,94,175/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರು | 3,44,57,291/– | 7.14 ಕಡಿಮೆ | 6.35 ಕಡಿಮೆ |
| 2 | ಎಸ್.ವಿ. ಬಂಡಿ, ಒಂದನೇ ದರ್ಜೆ ಗುತ್ತಿಗೆದಾರರು | 3,56,61,540/– | 3.90 ಕಡಿಮೆ | 3.07 ಕಡಿಮೆ |
| 3 | ಎಸ್.ಎಸ್.ಆಲೂರ, ಒಂದನೇ ದರ್ಜೆ ಗುತ್ತಿಗೆದಾರರು | 3,60,71,529/– | 2.79 ಕಡಿಮೆ | 1.96 ಕಡಿಮೆ |

ಮೇಲ್ಕಂಡಂತೆ ಶ್ರೀ ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅತ್ಯಂತ ಕಡಿಮೆ ದರಗಳನ್ನು ನಮೂದಿಸಿರುವ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.35ರಷ್ಟು ಕಡಿಮೆಯಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,67,94,175/-ಗಳ ಮೇಲೆ ಶೇ. **6.35**ರಷ್ಟು ಕಡಿಮೆ ದರಗಳಲ್ಲಿ ಅಂದರೆ ರೂ. 3,44,57,291/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 34 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ: 10ನೇ ಮೇ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ನೀವರಗಿ ಗ್ರಾಮದ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,67,94,175/-ಗಳ ಮೇಲೆ ಶೇ. **6.35ರಷ್ಟು ಕಡಿಮೆ** ದರಗಳಲ್ಲಿ ಅಂದರೆ ರೂ. 3,44,57,291/- ಗಳಿಗೆ (ರೂ. ಮೂರು ಕೋಟಿ ನಲವತ್ತನಾಲ್ಕು ಲಕ್ಷ ಐವತ್ತೇಳು ಸಾವಿರದ ಇನ್ನೂರ ತೊಂಭತ್ತೊಂದು) ಶ್ರೀ ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರುರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1303

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಮಾರಪ್ಪ ನಾಯ್ಕ, ಮಾಜಿ ಪಿ.ಸಿ. ಹೊಸಪೇಟೆ ಗ್ರಾಮಾಂತರ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಬಳ್ಳಾರಿ, ಇವರ ಆದೇಶ ಸಂಖ್ಯೆ 03/ಇವಿ/ಸಿಬ್ಬಂದಿ–4/2009 (ಓ.ಬಿ. 459/2009) ದಿ: 26–11–09.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ : 56/ಅಪೀಲು/ಸಿಬ್ಬಂದಿ–2/2009–10 (ಓ.ಬಿ. 315/2009–10) ದಿನಾಂಕ: 17–3–10
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 08–06–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 27/2010–11 ದಿನಾಂಕ: 29–09–2010.

**ಪ್ರಸ್ತಾವನೆ :**

ಶ್ರೀ ಮಾರಪ್ಪ ನಾಯ್ಕ ಇವರು ಹೊಸಪೇಟೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ, ಬೇಜವಾಬ್ದಾರಿತನ ದುರ್ನಡತೆ ತೋರಿರುವ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ನೀವು ನಿಮ್ಮ ಮೇಲಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ದಿನಾಂಕ: 16–09–2008 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ.

ನೀವು ಶಿಸ್ತು ಪಾಲನಾ ಇಲಾಖೆಯಲ್ಲಿ ಜವಾಬ್ದಾರಿಯುತ ಪೇದೆ ಹುದ್ದೆಯಲ್ಲಿದ್ದುಕೊಂಡು ಶಿಸ್ತನ್ನು ಮರೆತು ಅನಧಿಕೃತವಾಗಿ ಗೈರುಹಾಜರಾಗಿ ಠಾಣೆಯ ಕೆಲಸ ಕಾರ್ಯಗಳಿಗೆ ಅಡಚಣೆಯನ್ನುಂಟು ಮಾಡಿರುತ್ತೀರಿ. ಈ ರೀತಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ, ಬೇಜವಾಬ್ದಾರಿತನ, ದುರ್ನಡತೆ ತೋರಿರುವುದು ಮೇಲ್ನೋಟಕ್ಕೆ ಕಂಡು ಬಂದ ಕಾರಣ, ಈ ಕೆಳಗಿನಂತೆ ಆದೇಶಿಸಲಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 26–11–09ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 16–09–08 ರಿಂದ 25–01–09 ಮತ್ತು 03–02–09 ರಿಂದ 26–11–09ರ ವರೆಗಿನ ಅವಧಿಯನ್ನು ಸಂಬಳರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 17–03–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 99 ಪೊಸಿಅ 2010, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಾರಪ್ಪ ನಾಯ್ಕ ಮಾಜಿ ಪಿ.ಸಿ., ಹೊಸಪೇಟೆ ಗ್ರಾಮಾಂತರ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1367

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಹಣಗಿ, ಮಾಜಿ, ಸಿ.ಪಿ.ಸಿ. ತೇರದಾಳ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೋಲಿಸ್ ಅಧೀಕ್ಷಕರು ಬಾಗಲಕೋಟೆ, ಇವರ ಆದೇಶ ಸಂಖ್ಯೆ ಸಿಬ್ಬಂದಿ–3/ಡಿಇ/07/2008 (ಓ.ಬಿ. 244/2009) ದಿ: 31–08–09.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು(30)/ಉವ/2010, ದಿನಾಂಕ: 19–3–2010.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 04–06–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/28/2010–11 ದಿನಾಂಕ: 15–11–2010.

**ಪ್ರಸ್ತಾವನೆ :**

ಶ್ರೀ ಎಸ್.ಆರ್. ಹಣಗಿ, ಇವರು ತೇರದಾಳ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ಆಪಾದಿತರಾದ ಸಿ.ಪಿ.ಸಿ.–1363 ಎಸ್.ಆರ್. ಹಣಗಿ, ತೆರದಾಳ ಪೊಲೀಸ್ ಠಾಣೆ, ನೀವು ತೆರದಾಳ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ನಿಮ್ಮ ಪತ್ನಿ ಶ್ರೀಮತಿ ಸಾಜಿದಾಬೇಗಂ ಇವಳ ಜೊತೆ ದಿನಾಂಕ: 03–06–2007 ರಂದು ಮದುವೆ ಮಾಡಿಕೊಳ್ಳುವ ಕಾಲಕ್ಕೆ ರೂ. 30,000/– ಗಳು 2 ತೊಲಿ ಬಂಗಾರ ಹಾಗೂ ಬಟ್ಟೆ ಬರೆಗೆ ಅಂತ ರೂ. 10000/– ಗಳು ಹೀಗೆ ವರದಕ್ಷಿಣೆ ಪಡೆದು, ವರದಕ್ಷಿಣೆ ನಿರ್ಮೂಲನಾ ಕಾಯ್ದೆ 1961 ಕಲಂ 4 ಹಾಗೂ ಕೆ.ಸಿ.ಎಸ್. (ನಡತೆ ನಿಯಮಗಳು 1966ರ ಉಪ ನಿಯಮ 14(ಎ) 1 ನೇದ್ದನ್ನು ಉಲ್ಲಂಘಿಸಿದ್ದಿರಿ, ಮದುವೆಯಲ್ಲಿ ಕೊಟ್ಟ ವರದಕ್ಷಿಣೆ ಸಾಲದೆಂಬಂತೆ ನಿಮ್ಮ ಪತ್ನಿಗೆ ತವರು ಮನೆಯಿಂದ ಇನ್ನಷ್ಟು ವರದಕ್ಷಿಣೆ ರೂ. 70,000/– ಗಳನ್ನು ಹಾಗೂ 2 ತೊಲೆ ಬಂಗಾರ ತರುವಂತೆ ಬೇಡಿಕೆ ನೀಡಿ ಕೆ.ಸಿ.ಎಸ್. (ನಡತೆ) ನಿಯಮಗಳು 1966 ಉಪ ನಿಯಮ 14(ಎ)(2) ನೇದ್ದನ್ನು ಉಲ್ಲಂಘಿಸಿರುತ್ತೀರಿ, ಮದುವೆಯ ನಂತರ ನಿಮ್ಮ ಸಮಾಜದ ಪದ್ಧಿತಿಯಂತೆ ಹೆಂಡತಿಗೆ ಶುಚಿಯಾದ ಬುರ್ಕಾ ಕೊಡಿಸದೇ ಬೇರೆ ಯಾರದೋ ಉಪಯೋಗಿಸಿದ ಬುರ್ಕಾ ಕೊಡಿಸಿದ್ದು, ನಿಮ್ಮ ಪತ್ನಿಯು ಹಳೇ ಬುರ್ಕಾದ ವಾಸನೆ ತಾಳಲಾರದೇ ವಾಂತಿ ಮಾಡಿಕೊಂಡಿದ್ದು, ವಾಂತಿ ಮಾಡಿದ್ದನ್ನೇ ನೆಪವಾಗಿಟ್ಟುಕೊಂಡು, ಅವಳ ಶೀಲದ ಬಗ್ಗೆ ಸಂಶಯ ತಾಳಿ, ಇಲ್ಲ ಸಲ್ಲದ ಆಪಾದನೆ ಹೊರಿಸಿ, ಹೆಚ್ಚಿನ ವರದಕ್ಷಿಣೆ ಆಸೆಗಾಗಿ ನೀವು ನಿಮ್ಮ ತಾಯಿ ಹಾಗೂ ಇತರರೊಂದಿಗೆ ಸೇರಿಕೊಂಡು ನಿಮ್ಮ ಪತ್ನಿಗೆ ಹೊಡಿಬಡಿ ಮಾಡಿ, ಹೀಯಾಳಿಸಿ ಬೈದಾಡಿ ಕಿರಿಕಿರಿಮಾಡಿ ಮಾನಸಿಕ ಮತ್ತು ದೈಹಿಕ ಹಿಂಸೆ ನೀಡಿ, ಮಹಿಳಾ ದೌರ್ಜನ್ಯ ನಿಯಂತ್ರಣ ಕಾಯ್ದೆ 2005 ಮತ್ತು 2006 ನೇದ್ದವುಗಳನ್ನು ಹಾಗೂ ಕಲಂ 498(ಎ) ಸಹ ಕಲಮ 34 ಐಪಿಸಿ ನೇದ್ದವುಗಳನ್ನು ಉಲ್ಲಂಘಿಸಿದ್ದೀರಿ. ಹೆಂಡತಿ ಶ್ರೀಮತಿ ಸಾಜಿದಾ ಬೇಗಂ ಇವರ ಯೋಗಕ್ಷೇಮದ ಬಗ್ಗೆ ನಿರ್ಲಕ್ಷಿಸಿ, ಕೆ.ಪಿ.ಎಂ. ಆದೇಶ ಸಂಖ್ಯೆ 319 ನೇದ್ದನ್ನು ಉಲ್ಲಂಘಿಸಿದ್ದರೀ, ನೀವು ಒಬ್ಬ ಸರ್ಕಾರಿ ನೌಕರನಿಗೆ ಸಲ್ಲದ ಕೃತ್ಯವೆಸಗಿ ನೀವು ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲ್ಯಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ.

ಆಪಾದಿತರಾದ ಸಿ.ಪಿ.ಸಿ –1363 ಎಸ್.ಆರ್. ಹಣಗಿ, ತೆರದಾಳ ಪೊಲೀಸ್ ಠಾಣೆ, ನೀವು ತೆರದಾಳ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ನಿಮ್ಮ ಪತ್ನಿ ಶ್ರೀಮತಿ ಸಾಜಿದಾಬೇಗಂ ಇವಳ ಜೊತೆ ದಿನಾಂಕ: 03–06–2007 ರಂದು ಮದುವೆ ಮಾಡಿಕೊಳ್ಳುವ ಕಾಲಕ್ಕೆ ರೂ. 30,000/– ಗಳು 2 ತೊಲಿ ಬಂಗಾರ ಹಾಗೂ ಬಟ್ಟೆ ಬರೆಗೆ ಅಂತ ರೂ. 10000/– ಗಳು ಹೀಗೆ ವರದಕ್ಷಿಣೆ ಪಡೆದು ವರದಕ್ಷಿಣೆ ನಿರ್ಮೂಲನಾ ಕಾಯ್ದೆ 1961 ಕಲಂ 4 ಹಾಗೂ ಕೆ.ಸಿ.ಎಸ್. (ನಡತೆ ನಿಯಮಗಳು 1966ರ ಉಪ ನಿಯಮ 14(ಎ) 1 ನೇದ್ದನ್ನು ಉಲ್ಲಂಘಿಸಿದ್ದಿರಿ, ಮದುವೆಯಲ್ಲಿ ಕೊಟ್ಟ ವರದಕ್ಷಿಣೆ ಸಾಲದೆಂಬಂತೆ ನಿಮ್ಮ ಪತ್ನಿಗೆ ತವರು ಮನೆಯಿಂದ ಇನ್ನಷ್ಟು ವರದಕ್ಷಿಣೆ ರೂ. 70,000/– ಗಳನ್ನು ಹಾಗೂ 2 ತೊಲೆ ಬಂಗಾರ ತರುವಂತೆ ಬೇಡಿಕೆ ನೀಡಿ ಕೆ.ಸಿ.ಎಸ್. (ನಡತೆ) ನಿಯಮಗಳು 1966 ಉಪ ನಿಯಮ 14(ಎ)(2) ನೇದ್ದನ್ನು ಉಲ್ಲಂಘಿಸಿರುತ್ತೀರಿ, ಮದುವೆಯ ನಂತರ ನಿಮ್ಮ ಸಮಾಜದ ಪದ್ಧತಿಯಂತೆ ಹೆಂಡತಿಗೆ ಶುಚಿಯಾದ ಬುರ್ಕಾ ಕೊಡಿಸದೇ ಬೇರೆ ಯಾರದೋ ಉಪಯೋಗಿಸಿದ ಬುರ್ಕಾ ಕೊಡಿಸಿದ್ದು, ನಿಮ್ಮ ಪತ್ನಿಯು ಹಳೇ ಬುರ್ಕಾದ ವಾಸನೆ ತಾಳಲಾರದೇ ವಾಂತಿ ಮಾಡಿಕೊಂಡಿದ್ದು, ವಾಂತಿ ಮಾಡಿದ್ದನ್ನೇ ನೆಪವಾಗಿಟ್ಟುಕೊಂಡು, ಅವಳ ಶೀಲದ ಬಗ್ಗೆ ಸಂಶಯ ತಾಳಿ, ಇಲ್ಲ ಸಲ್ಲದ ಆಪಾದನೆ ಹೊರಿಸಿ, ಹೆಚ್ಚಿನ ವರದಕ್ಷಿಣೆ ಆಸೆಗಾಗಿ ನೀವು ನಿಮ್ಮ ತಾಯಿ ಹಾಗೂ ಇತರರೊಂದಿಗೆ ಸೇರಿಕೊಂಡು ನಿಮ್ಮ ಪತ್ನಿಗೆ ಹೊಡಿಬಡಿ ಮಾಡಿ, ಹೀಯಾಳಿಸಿ ಬೈದಾಡಿ ಕಿರಿಕಿರಿಮಾಡಿ ಮಾನಸಿಕ ಮತ್ತು ದೈಹಿಕ ಹಿಂಸೆ ನೀಡಿ, ಮಹಿಳಾ ದೌರ್ಜನ್ಯ ನಿಯಂತ್ರಣ ಕಾಯ್ದೆ 2005 ಮತ್ತು 2006 ನೇದ್ದವುಗಳನ್ನು ಹಾಗೂ ಕಲಂ 498(ಎ) ಸಹ ಕಲಮ 34 ಐಪಿಸಿ ನೇದ್ದವುಗಳನ್ನು ಉಲ್ಲಂಘಿಸಿದ್ದಿರಿ. ಹೆಂಡತಿ ಶ್ರೀಮತಿ ಸಾಜಿದಾ ಬೇಗಂ ಇವಳ ಯೋಗಕ್ಷೇಮದ ಬಗ್ಗೆ ನಿರ್ಲಕ್ಷಿಸಿ, ಮಾನಸಿಕ ಕಿರುಕುಳ ಕೊಟ್ಟು ವರದಕ್ಷಿಣೆ ಬೇಡಿ ಬಂಗಾರ ತರಲು ತಿಳಿಸಿ ಮಾನಸಿಕ ಮತ್ತು ದೈಹಿಕ ಹಿಂಸೆ ನೀಡಿದ್ದರಿಂದ ಈ ಬಗ್ಗೆ ನಿಮ್ಮ ಸದರಿ ಪಿ.ಸಿ. ಯವರ ಪತ್ನಿ ಸಾಜಿದಾಬೇಗಂ ಗಂಡ ಸಲಿಂ ಜಾವೇದ ಹಣಗಿ ಸಾ. ಇಲಕಲ್ಲ ಇವಳು ಬಾಗಲಕೋಟೆ ಗ್ರಾಮೀಣ ಪಿ.ಎಸ್. ದಲ್ಲಿ ದೂರು ಸಲ್ಲಿಸಿದ್ದು ಇದ್ದು ಅದು ಬಾಗಲಕೋಟೆ ಗ್ರಾಮೀಣ ಪಿ.ಎಸ್. ಗುನ್ನೆ ನಂ 96/08 ಕಲಂ 498(ಎ) 4 ಡಿ.ಪಿ.ಆಕ್ಟ್ ರ.ವಿ. 34 ಐಪಿಸಿ ಕೆಳಗಡೆ ದಿನಾಂಕ: 14–06–2008 ರಂದು ದಾಖಲಾಗಿ ತನಿಖೆ ಪೂರೈಸಿದ್ದು ಅಲ್ಲದೆ ಅದು ನ್ಯಾಯಾಲಯದಲ್ಲಿ ಸಿ.ಸಿ.ನಂ. 38/08ರ ಕೆಳಗಡೆ ವಿಚಾರಣೆಯಲ್ಲಿರುತ್ತದೆ. ಮತ್ತು ನೀವು ಶಿಸ್ತಿನ ಇಲಾಖೆಯಲ್ಲಿದ್ದು, ಗಂಭೀರ ಸ್ವರೂಪದ ಕೃತ್ಯವೆಸಗಿ ಅಶಿಸ್ತು ಪ್ರದರ್ಶಿಸಿದ ಬಗ್ಗೆ ಪೂರ್ವಭಾವಿ ವಿಚಾರಣೆಗೆ ಮಾನ್ಯ ಎಸ್.ಪಿ. ರವರು ಆದೇಶ ಮಾಡಿದ್ದರಿಂದ ದಿನಾಂಕ 25–06–2008 ರಂದು ಪ್ರೊಬೇಶನ್ ಡಿ.ಎಸ್.ಪಿ. ರವರು ಪೂರ್ವಭಾವಿ ವಿಚಾರಣೆ ಕೈಗೊಂಡು ತಮ್ಮ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಪೂರ್ವಬಾವಿ ವಿಚಾರಣೆಯಲ್ಲಿ ಸಹಾ ನೀವು ಆಪಾದನೆ ಮಾಡಿರುವುದು ರುಜುವಾತು ಆಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರು

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 31–8–09ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕಲಾಗಿದೆ ದಿ: 11–07–2008 ರಿಂದ 22–07–2009ರ ವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲಿಲ್ಲದ ದಿನಗಳೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–03–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 98 ಪೊಸಿಅ 2010, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಎಸ್.ಆರ್. ಹಣಗಿ, ಮಾಜಿ ಸಿ.ಪಿ.ಸಿ. ತೇರದಾಳ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1368

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ. ಷಣ್ಮುಖಾಚಾರ ಹೆಚ್.ಸಿ. ಜೀವನ ಭೀಮಾನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ 6/ಡಿಇ//ಆರ್6/ಡಿಸಿಪಿಉ/2005 ದಿ: 31–10–07.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ: 96/ಅಪೀಲು/2007, ದಿನಾಂಕ: 05–06–2008 ಮತ್ತು 02–02–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 09–10–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/51/2009–10, ದಿನಾಂಕ: 16–7–2010.

**ಪ್ರಸ್ತಾವನೆ :**

ಶ್ರೀ ಪಿ.ಷಣ್ಮುಖಾಚಾರ ಹೆಚ್.ಸಿ. ಜೀವನ ಭೀಮಾನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಯಶವಂತಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಕ್ಕಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ಶ್ರೀ ಪಿ. ಷಣ್ಮುಖಾಚಾರ ಹೆಚ್.ಸಿ. 3036 ಯಶವಂತಪುರ ಪೋಲೀಸ್ ಠಾಣೆ ಆದ ನೀವು ಯಶವಂತಪುರ ಠಾಣೆಯಲ್ಲಿ ಅಪರಾಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಇದೇ ಠಾಣೆಯ ಅ.ಕ್ರ. 248/05 ಕಲಂ 420 ಐ.ಪಿ.ಸಿ. ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ರಮೇಶ್, # 259, ಪಿ.ಡಬ್ಲ್ಯೂ.ಡಿ. ವಸತಿ ಗೃಹ, ಯಲಹಂಕ ಉಪನಗರ, ಬೆಂಗಳೂರು ಇವರನ್ನು ಠಾಣೆಗೆ ಕರೆತಂದು ದಸ್ತಗಿರಿ ಮಾಡಿ ದಿ: 28–08–05 ರಂದು ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುವುದು ಸರಿಯಷ್ಟೆ. ಸದರಿ ಆರೋಪಿ ರಮೇಶ್ ರವರ ಪತ್ನಿ ಶ್ರೀಮತಿ ಅಂಬಿಕಾ ರವರನ್ನು ನೀವು ದೂರವಾಣಿ ಮುಖೇನ ಸಂಪರ್ಕಿಸಿ ದಿ: 02–09–05 ಸಂಜೆ 6–00 ಗಂಟೆಗೆ ಯಶವಂತಪುರ ಠಾಣೆಯ ಬಳಿ ಬರಲು ತಿಳಿಸಿ ನಂತರ ಆಕೆಯೊಂದಿಗೆ ಯಲಹಂಕ ಉಪನಗರದ ಆಕೆಯ ಮನೆಗೆ ಹೋಗಿ ಮನೆ ಒಳಗೆ ಪ್ರವೇಶಿಸಿ ಆಕೆಯನ್ನು ಕುರಿತು ನಿನ್ನ ಮಗುವನ್ನು ಮನೆಗೆ ಕಳುಹಿಸು, ನಂತರ ನಾನು ಮನೆಗೆ ಬರುತ್ತೇನೆ ಎಂದು ಹೇಳಿ 20 ನಿಮಿಷಗಳ ನಂತರ ಮದ್ಯಪಾನ ಮಾಡಿಕೊಂಡು ಆಕೆಯ ಮನೆಯೊಳಗೆ ಪ್ರವೇಶಿಸಿ ಆಕೆಯೊಂದಿಗೆ ಅನುಚಿತವಾಗಿ ವರ್ತಿಸಲು ಯತ್ನಿಸಿರುತ್ತೀರಿ. ಆ ಸಮಯದಲ್ಲಿ ಶ್ರೀಮತಿ ಅಂಬಿಕಾರವರು ಈ ಮೊದಲೇ ಮಾಡಿಕೊಂಡ ಪೂರ್ವ ತಯಾರಿ ಯೋಜನೆಯಂತೆ ಆಕೆಯ ಮೈದುನ ಶ್ರೀ ರಾಘವೇಂದ್ರ # 31 2ನೇ ಕ್ರಾಸ್ ನಂಜಮ್ಮ ಬಡಾವಣೆ, ಮನೋರಾಯನ ಪಾಳ್ಯ, ಆರ್.ಟಿ. ನಗರ ಬೆಂಗಳೂರು ರವರು ಈ ಟಿ.ವಿ. ವರದಿಗಾರರೊಂದಿಗೆ ಸ್ಥಳಕ್ಕೆ ಆಗಮಿಸಿದಾಗ ನೀವು ಸದರಿ ಮನೆಯಲ್ಲಿ ಶ್ರೀಮತಿ ಅಂಬಿಕಾ ರವರೊಂದಿಗೆ ಅಸಭ್ಯವಾಗಿ ವರ್ತಿಸುತ್ತಿರುವುದನ್ನು ನೋಡಿ ನಿಮ್ಮನು ಹಿಡಿದು ಯಲಹಂಕ ಉಪನಗರ ಪೊಲೀಸ್ ಠಾಣೆಯಲ್ಲಿ ಹಾಜರುಪಡಿಸಿರುತ್ತಾರೆ. ಅಲ್ಲಿ ನಿಮ್ಮ ವಿರುದ್ಧ ಶ್ರೀಮತಿ ಅಂಬಿಕಾ ರವರು ನೀಡಿದ ದೂರಿನ ಮೇರೆಗೆ ಅ.ಕ್ರ. 214/05 ಕಲಂ 354.509 ಐ.ಪಿ.ಸಿ. ರೀತ್ಯಾ ಪ್ರಕರಣ ದಾಖಲಾಗಿದ್ದು ಅಸಭ್ಯವಾಗಿ ವರ್ತಿಸಿ ಅಧಿಕಾರ ದುರುಪಯೋಗ

ಪಡಿಸಿಕೊಂಡಿರುವುದಲ್ಲದೆ ಇಲಾಖೆಗೆ ಅಗೌರವವನ್ನು ತಂದಿರುತ್ತೀರಿ ಹಾಗೂ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿ–ತನವನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ. ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 31–10–07ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ. ದಿ: 03–09–05 ರಿಂದ 15–12–05ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, (ಆಡಳಿತ) ಬೆಂಗಳೂರು, ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05–06–08 ಮತ್ತು 02–02–09ರ ಆದೇಶಗಳಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಅರ್ಜಿದಾರರನ್ನು ಪುನಃ ಕರ್ತವ್ಯಕ್ಕೆ ನೇಮಕ ಮಾಡಲಾಗಿದೆ. ಇವರ ವೇತನವನ್ನು ಅವರು ಹೊಂದಿರುವ ಹುದ್ದೆಯ ಕನಿಷ್ಠ ಮಟ್ಟಕ್ಕೆ 2 ವರ್ಷಗಳ ಕಾಲ ಇಳಿಸಲಾಗಿದೆ. ದಿನಾಂಕ: 03–09–05 ರಿಂದ 15–12–05ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ ಹಾಗೂ ಸೇವೆಯಿಂದ ಹೊರಗುಳಿದ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (Dies-non)ಆದೇಶಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ. ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 181 ಪೊಸಿಅ 2009, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ. ಷಣ್ಮುಖಾಚಾರ ಹೆಚ್.ಸಿ. ಜೀವನ ಭೀಮಾನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1369

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಂಜೀವಪ್ಪ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಚೇಳೂರು ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ ಫನ್ಸಿ/35/ಡಿಇ/2008–09 (ಓ.ಬಿ. 90/2009–10) ದಿ: 28–09–2009.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು–4/67/2009–10, (ಓ.ಬಿ. 66/2009–10) ದಿನಾಂಕ: 08–03–2010.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 01–07–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/33/2010–11, ದಿನಾಂಕ: 03–09–2010.

**ಪ್ರಸ್ತಾವನೆ :**

ಶ್ರೀ ಸಂಜೀವಪ್ಪ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಚೇಳೂರು ಪೊಲೀಸ್ ಠಾಣೆ, ಇವರು ಮಾಲೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷತೆ ಹಾಗೂ ' ಬೇಜವಾಬ್ದಾರಿಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇನ್ನೋರ್ವ ಅಧಿಕಾರಿಯೊಂದಿಗೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ಮಾಲೂರು ತಾಲ್ಲೂಕು ಬೆನ್ನಘಟ್ಟ ಗ್ರಾಮದ ಮೃತ ಮುನಿರಾಜು ರವರ ಸಂಬಂಧಿಯಾದ ತಮ್ಮರಾಯಪ್ಪ ಎಂಬುವವರಿಗೂ ಮತ್ತು ಉಮೇಶ್, ವೆಂಕಟರವಣಪ್ಪ ರವರುಗಳಿಗೆ ಮನೆ ಬಳಿಯ ಚರಂಡಿ ವಿಚಾರದಲ್ಲಿ ವೈಮನಸ್ಸಿದ್ದು, ಈ ವಿಚಾರದಲ್ಲಿ ಮುನಿರಾಜನು ತಿಮ್ಮರಾಯಪ್ಪನ ಪರವಾಗಿ ಮಾತನಾಡಿದ ಎಂಬ ಹಿನ್ನೆಲೆಯಲ್ಲಿ ಉಮೇಶ, ವೆಂಕಟರವಣಪ್ಪ ರವರಿಗೆ ಮುನಿರಾಜನ ಮೇಲೆ ದ್ವೇಷವಿದ್ದು, ಈಗಿರುವಲ್ಲಿ ದಿನಾಂಕ : 24–10–2005 ರಂದು ಮಧ್ಯಾಹ್ನ 12–30 ಗಂಟೆಯಲ್ಲಿ ಮುನಿರಾಜನು ಡಿ.ಎನ್. ದೊಡ್ಡಿ ಗ್ರಾಮದಲ್ಲಿ ಹೋಟೆಲ್‌ವೊಂದರಲ್ಲಿ ಬೋಂಡಾ ತೆಗೆದುಕೊಂಡಾಗ ಅಲ್ಲಿದ್ದ ಉಮೇಶ ವೆಂಕಟರವಣಪ್ಪ ರವರುಗಳು ಮುನಿರಾಜನ ಮೇಲೆ " ನೀನು ಹೊಲೆಯ ಬೋಂಡಾ ಮುಟ್ಟಬೇಡ" ಎಂದು ಗಲಾಟೆ ಮಾಡಿದ್ದು, ನಂತರ ಅದೇ ದಿನ ಸಂಜೆ ಮುನಿರಾಜನು ಮಾಲೂರು ಪೊಲೀಸ್ ಠಾಣೆಗೆ ಬಂದು ಮೇಲ್ಕಂಡ ವಿಚಾರವಾಗಿ ಠಾಣೆಯಲ್ಲಿ

ಹಾಜರಿದ್ದ ಪಿ.ಎಸ್.ಐ. ಆದ ನಿಮಗೆ ದೂರನ್ನು ನೀಡಿದ್ದು, ಅದೇ ದಿನ ಸಂಜೆ ಉಮೇಶ ಸಹ ಠಾಣೆಗೆ ಬಂದು ದೂರನ್ನು ನೀಡಿದ್ದು, ಸದರಿ ದಿನ ಮಧ್ಯಾಹ್ನ 12–30 ಗಂಟೆಯಲ್ಲಿ ಡಿ.ಎನ್. ದೊಡ್ಡಿ ಗ್ರಾಮದಲ್ಲಿ ಹೋಟೆಲ್ ಬಳಿ ಮುನಿರಾಜನು ಉಮೇಶನ ಮೇಲೆ ಬೈದು ಜಗಳ ಮಾಡಿದ ಎಂದು ತಿಳಿಸಿದ್ದು, ಅದರ ಮೇರೆಗೆ ಸಂಜೆ 18.10 ಗಂಟೆಯಲ್ಲಿ ಪಿ.ಎಸ್.ಐ. ಆದ ನೀವು ಠಾಣಾ ಎನ್.ಸಿ.ಆರ್. 200/2005 ಪ್ರಕಾರ ದೂರನ್ನು ದಾಖಲು ಮಾಡಿರುತ್ತೀರಿ. ಆದರೆ ಮುನಿರಾಜನು ನೀಡಿದ ದೂರಿನ ಮೇರೆಗೆ ನೀವು ಯಾವುದೇ ಕ್ರಮ ತೆಗೆದುಕೊಂಡಿರುವುದಿಲ್ಲ. ಮುನಿರಾಜನು ಪಾನಮತ್ತನಂತೆ ಕಂಡು ಬಂದಿದ್ದು, ಆತನನ್ನು ವಿಚಾರಣೆ ಸಲುವಾಗಿ ಮಾರನೇ ದಿನ ಹಾಜರಾಗುವಂತೆ ತಿಳಿಸಿ ಕಳುಹಿಸಿದಂತೆ ಠಾಣಾ ದಿನಚರಿಯಲ್ಲಿ ನಮೂದು ಮಾಡಿರುತ್ತೀರಿ. ಸಂಜೆ ಉಮೇಶ ಮತ್ತು ಮುನಿರಾಜು ಠಾಣೆಯಿಂದ ಬೆನ್ನಘಟ್ಟ ಗ್ರಾಮಕ್ಕೆ ಹಿಂದಿರುಗಿದ್ದು, ಅದೇ ದಿನ ರಾತ್ರಿ 7.30 ಗಂಟೆಯಲ್ಲಿ ವೆಂಕಟರವಣಪ್ಪ ರವರ ಚಿತಾವಣೆ ಮೇರೆಗೆ ಬೆನ್ನಘಟ್ಟ ಗ್ರಾಮದಲ್ಲಿ ಉಮೇಶ ಮಚ್ಚಿನಿಂದ ಮುನಿರಾಜನ ತಲೆ ಕತ್ತರಿಸಿ ಕೊಲೆ ಮಾಡಿರುತ್ತಾರೆ.

ಎರಡೂ ಕಡೆಯವರಿಗೆ ಮನಸ್ಥಾಪಗಳಿದ್ದು, ಅವರುಗಳು ದಿ: 24–10–05 ರಂದು ಮಧ್ಯಾಹ್ನ 12.30 ಗಂಟೆಯಲ್ಲಿ ಡಿ.ಎನ್. ದೊಡ್ಡಿ ಗ್ರಾಮದಲ್ಲಿ ಜಗಳ ಮಾಡಿಕೊಂಡು ಅದೇ ದಿನ ಸಂಜೆ ಮಾಲೂರು ಪೊಲೀಸ್ ಠಾಣೆಗೆ ಬಂದು ಒಬ್ಬರ ಮೇಲೊಬ್ಬರು ದೂರನ್ನು ನೀಡಿದ್ದು. ಪಿ.ಎಸ್.ಐ. ಆದ ನೀವು ಈ ಬಗ್ಗೆ ಕೂಡಲೇ ಕ್ರಮ ತೆಗೆದುಕೊಂಡು ಗ್ರಾಮದಲ್ಲಿ ಸಿಬ್ಬಂದಿಯನ್ನು ನೇಮಕ ಮಾಡಿ ಅಥವಾ ನೀವೇ ಖುದ್ದಾಗಿ ಗ್ರಾಮಕ್ಕೆ ಭೇಟಿಕೊಟ್ಟು ಸೂಕ್ತ ಬಂದೋಬಸ್ತ್ ಮಾಡಿದ್ದರೆ ಅದೇ ದಿನ ರಾತ್ರಿ ಮುನಿರಾಜನ ಕೊಲೆ ಆಗುವುದನ್ನು ತಪ್ಪಿಸಬಹುದಾಗಿತ್ತು.

ದಿನಾಂಕ 24–10–2005 ರಂದು ನೀವು ಠಾಣಾ ಪ್ರಭಾರದಲ್ಲಿದ್ದ ಸಮಯದಲ್ಲಿ ಸಂಜೆ ಎರಡೂ ಕಡೆಯವರು ಒಬ್ಬರ ಮೇಲೊಬ್ಬರು ದೂರನ್ನು ತೆಗೆದುಕೊಂಡು ಠಾಣೆಗೆ ಬಂದಿದ್ದಾಗ ಸದರಿ ದೂರುಗಳ ಬಗ್ಗೆ ಕಾನೂನು ಪ್ರಕಾರ ಸಕಾಲಿಕ ಕ್ರಮ ತೆಗೆದುಕೊಳ್ಳದೆ ಹಾಗೂ ಗ್ರಾಮದಲ್ಲಿ ಸೂಕ್ತ ಬಂದೋಬಸ್ತ್ ಮಾಡದೆ ಪಿ.ಎಸ್.ಐ. ಆದ ನೀವು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಬೇಜವಾಬ್ದಾರಿಯನ್ನು ತೋರಿರುವುದು ಆಪಾದನೆ."

ಮೇಲ್ಕಂಡ ಆರೋಪ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ. ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್, ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 28–09–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 08–03–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ. ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 115 ಪೊಸಿಅ 2009, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಂಜೀವಪ್ಪ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಚೇಳೂರು ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1370

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ.ನಂಜೇಗೌಡ ಆರ್.ಪಿ.ಐ., ಪಿ.ಡಿ.ಎಂ.ಎಸ್ ಯಲಹಂಕ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ(8) 115/2007–08 ದಿ: 23–4–10.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 01–07–2010.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 115/2007–08, ದಿನಾಂಕ: 27–8–2010.

**ಪ್ರಸ್ತಾವನೆ :**

ಶ್ರೀ ಜಿ.ನಂಜೇಗೌಡ ಆರ್.ಪಿ.ಐ., ಪಿ.ಡಿ.ಎಂ.ಎಸ್ ಯಲಹಂಕ ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಸರ್ಕಾರದ ಹಣವನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಂಡು ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ನೀವು ಪಿ.ಡಿ.ಎಂ.ಎಸ್. ಯಲಹಂಕದಲ್ಲಿ ದಿನಾಂಕ : 08–02–2007ರ ಅಪರಾಹ್ನದಿಂದ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ನೀವು ಮೆಸ್ ಉಸ್ತುವಾರಿ ಅಧಿಕಾರಿಯಾಗಿದ್ದು, ಅದನ್ನು ಪಾರದರ್ಶಕವಾಗಿ ನಡೆಸಿರುವುದಿಲ್ಲ. ಮೆಸ್‌ಗೆ ದಿನಸಿ ಸಾಮಗ್ರಿಗಳನ್ನು ಖರೀದಿಸಿರುವ ಮುನ್ನ ಪ್ರಾಂಶುಪಾಲರ ಅನುಮತಿ ಪಡೆದಿರುವುದಿಲ್ಲ. ಖರೀದಿಸಿದ ನಂತರವೂ ತಿಳಿಸಿಲ್ಲ. ಖರೀದಿಸಿದ ವಸ್ತುಗಳ ಪ್ರಮಾಣಗಳನ್ನು ಮತ್ತು ಅವುಗಳನ್ನು ಉಪಯೋಗಿಸಿದ ಅಂಶಗಳನ್ನು ನಮೂದಿಸಲು ಯಾವುದೇ ದಸ್ತಾವೇಜು ಇಟ್ಟಿರುವುದಿಲ್ಲ. ಬಿಲ್ಲು ಇಟ್ಟಿರುವ ಅಂಗಡಿಯಿಂದ ದಿನಸಿ ಸಾಮಗ್ರಿಗಳನ್ನು ಖರೀದಿಸಿರುವುದಿಲ್ಲ. ದಿ: 25–09–2007ರ ದಾಖಲೆಗಳ ಪ್ರಕಾರ ರೂ. 5,000.00 ಗಳನ್ನು ದುರುಪಯೋಗ ಪಡಿಸಿರುತ್ತೀರಿ. ನೀವು ಮಾಡಿರುವ ರೂ. 5,000.00 ಗಳ ದುರುಪಯೋಗ ಸಾಬೀತಾಗುತ್ತದೆಂದು ಗೊತ್ತಾದ ತಕ್ಷಣ ನಗದು ಪುಸ್ತಕದಲ್ಲಿನ ದುರುಪಯೋಗಕ್ಕೆ ಸಂಬಂಧಿಸಿದ ಹಾಳೆಯನ್ನು ಹರಿದು ಬಾಕಿ ಖರ್ಚು ಮತ್ತು ಆದಾಯವು ತಾಳೆಯಾಗುವಂತೆ ಹೊಸ ಲೆಕ್ಕ ಬರೆದಿರುತ್ತೀರಿ. ಮೆ: ರಂಗನಾಥ್ ಆಟೋ ಮೊಬೈಲ್ ಅಂಗಡಿಯಿಂದ ದಿನಾಂಕ: 22–07–2007 ರಂದು ವಾಹನ ಸಂಖ್ಯೆ : ಕೆಎ–04 ಜಿ 155ಗೆ ಆಯಿಲ್ ಫಿಲ್ಟರ್, ಡೀಸಲ್ ಫಿಲ್ಟರ್ ಸರಬರಾಜು ಮಾಡುವ ಬಗ್ಗೆ ರೂ. 380.00 ಕ್ಕೆ ಎಸ್ಟಿಮೇಟ್ ಪಡೆದಿದ್ದು. ಹಾಗೆಯೇ ವಾಹನ ಸಂಖ್ಯೆ ಕೆಎ 04 ಜಿ 241 ಕ್ಕೆ ಆಯಿಲ್ ಫಿಲ್ಟರ್, ಡೀಸಲ್ ಫಿಲ್ಟರ್ ಸರಬರಾಜು ಮಾಡುವ ಬಗ್ಗೆ ರೂ 275.00ಕ್ಕೆ ಎಸ್ಟಿಮೇಟ್ ಪಡೆದಿದ್ದು. ಎಸ್ಟಿಮೇಟ್ ಪ್ರಕಾರ ಯಾವುದೇ ವಸ್ತುಗಳನ್ನು ಖರೀದಿಸದೇ ಸದರಿ ಎಸ್ಟಿಮೇಟ್‌ಗಳನ್ನು ಕ್ಯಾಶ್ ಬಿಲ್ಲು ಎಂದು ತೋರಿಸಿ ರೂ. 380.00+275.00 ಗಳನ್ನು ಸರ್ಕಾರದಿಂದ ಮರುಪಾವತಿ ಮಾಡಿಸಿಕೊಂಡು ಸ್ವಂತಕ್ಕೆ ಉಪಯೋಗಿಸಿಕೊಂಡಿರುತ್ತೀರಿ. ಮೋಟಾರ್ ಬೈಕ್ ಸಂ. ಸಿ.ಎಜಿ. 1586ಕ್ಕೆ ದಿನಾಂಕ: 14–09–2007 ರಂದು ಹೆಡ್‌ಲೈಟ್ ಬಲ್ಬ ಇತ್ಯಾದಿ ಬದಲಾಯಿಸಿ ಎ.ಪಿ.ಸಿ. ನಟರಾಜ್‌ರವರ ಮುಖಾಂತರ ಎಮ್‌ಟೆಕ್ ಗ್ಯಾರೇಜ್‌ನಿಂದ ಅನುಕೂಲಕ್ಕೆ ತಕ್ಕಂತೆ ಹೆಚ್ಚು ಹಣಕ್ಕೆ ಅಂದರೆ ರೂ. 30.00ಕ್ಕೆ ಬದಲಾಗಿ ರೂ. 290.00 ಗಳಿಗೆ ಬಿಲ್‌ನ್ನು ಪಡೆದು ಸರ್ಕಾರದಿಂದ ಮರುಪಾವತಿ ಮಾಡಿಸಿಕೊಂಡು ಅದನ್ನು ಸ್ವಂತಕ್ಕೆ ಉಪಯೋಗಿಸಿಕೊಂಡಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ನಿಮಗೆ ವಹಿಸಲಾದ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸದೆ ಮೆಸ್‌ನಲ್ಲಿ ಅಕ್ರಮವೆಸಗಿರುವುದು ಮತ್ತು ಸರ್ಕಾರಿ ವಾಹನಗಳ ದುರಸ್ತಿ ವಿಚಾರದಲ್ಲಿ ಅವ್ಯವಹಾರ ನಡೆಸಿ ಸಕಾರದ ಹಣವನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಂಡು ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಬೇಜಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣೆಯಲ್ಲಿ ಇಲಾಖಾ ಅ.ಪೊ.ಅ. ರವರ ವಿರುದ್ಧದ 1ನೇ ಆರೋಪವು ಸಾಬೀತಾಗಿರುತ್ತದೆ. ಎರಡನೇ ಆರೋಪವು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿಯಲ್ಲಿ ತಿಳಿಸಿದ್ದು ಸದರಿ ವರದಿಯನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 23–4–10ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಸಹಿತವಾಗಿ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು. ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 116 ಪೊಸಿಅ 2010, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ನಂಜೇಗೌಡ ಆರ್.ಪಿ.ಐ., ಪಿ.ಡಿ.ಎಂ.ಎಸ್ ಯಲಹಂಕ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1371

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ರಾಜೇಶ್, ಪಿ.ಎಸ್.ಐ., ಯಸಳೂರು ಪೊಲೀಸ್ ಠಾಣೆ ಸಕಲೇಶಪುರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಹಾಸನ, ಇವರ ಆದೇಶ ಸಂಖ್ಯೆ ಸಿಬ್ಬಂದಿ (1)/ಪಿಆರ್/68/08 (ಓ.ಬಿ. 282/08) ದಿ: 22–12–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/45/2008–09, (ಓ.ಬಿ. 45/2008–09) ದಿನಾಂಕ: 11–03–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 25–5–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/25/2010–11, ದಿನಾಂಕ: 13–08–2010.

**ಪ್ರಸ್ತಾವನೆ :**

ಶ್ರೀ ರಾಜೇಶ್, ಇವರು ಹಾಸನದ ಟ್ರಾಫಿಕ್ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ತರಹದ ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ಶ್ರೀ ಸಿದ್ಧರಾಮೇಶ್ವರ, ಪಿ.ಎಸ್.ಐ., ಟ್ರಾಫಿಕ್ –1 ಹಾಗೂ ಶ್ರೀ ರಾಜೇಶ್ ಪಿ.ಎಸ್.ಐ. ಟ್ರಾಫಿಕ್ –2 ಇಬ್ಬರೂ ಹಾಸನದ ಟ್ರಾಫಿಕ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಹಾಸನ ಸಂಚಾರಿ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಪ್ರಕರಣಗಳಲ್ಲಿ ಅಪಘಾತಕ್ಕೀಡಾದ ವಾಹನಗಳನ್ನು ಅಮಾನತ್ತುಪಡಿಸಿಕೊಂಡಿದ್ದು, ಒಟ್ಟು 81 ವಿವಿಧ ರೀತಿಯ ವಾಹನಗಳನ್ನು ಡಿ.ಎ.ಆರ್. ಪೊಲೀಸ್ ಗೆಸ್ಟ್‌ಹೌಸ್ ಪಕ್ಕದಲ್ಲಿ ಮತ್ತು ಹೊಸ ಪೊಲೀಸ್ ವಸತಿಗೃಹದ ಬಳಿ ನಿಲ್ಲಿಸಿದ್ದು, ಈ ವಾಹನಗಳಿಗೆ ಸಂಬಂಧಪಟ್ಟ ಪ್ರಕರಣಗಳು ನ್ಯಾಯಾಲಯದಲ್ಲಿ ಈಗಾಗಲೇ ವಿಲೇವಾರಿಯಾಗಿದ್ದು, ವಾಹನಗಳನ್ನು ಸುಮಾರು ವರ್ಷಗಳಿಂದ ವಿಲೇವಾರಿ ಮಾಡದೆ ಇಟ್ಟುಕೊಂಡಿರುವುದರಿಂದ, ಇವುಗಳನ್ನು ವಿಲೇವಾರಿ ಮಾಡುವ ಬಗ್ಗೆ ನಿಮಗೆ ಹಲವಾರು ಬಾರಿ ಮೌಖಿಕ ಮತ್ತು ಜ್ಞಾಪನಗಳ ಮೂಲಕ ಸೂಚನೆ ನೀಡಿ ಅಮಾನತ್ತುಪಡಿಸಿಕೊಂಡಿರುವ ವಾಹನಗಳ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸಗಳನ್ನು ಆರ್.ಟಿ.ಓ. ಕಛೇರಿಯಿಂದ ಪಡೆದುಕೊಂಡು ಆರ್.ಸಿ. ಮಾಲೀಕರಿಗೆ ವಾಹನಗಳನ್ನು ನ್ಯಾಯಾಲಯದ ಅನುಮತಿ ಪಡೆದು ಬಿಟ್ಟುಕೊಟ್ಟು ವರದಿಯನ್ನು ಸಲ್ಲಿಸುವಂತೆ ಸೂಚಿಸಿದ್ದರೂ ಸಹ ಇದುವರೆಗೆ ವಾಹನಗಳನ್ನು ವಿಲೇವಾರಿ ಮಾಡಲು ಯಾವುದೇ ಕ್ರಮಗಳನ್ನು ಕೈಗೊಂಡಿರುವುದಿಲ್ಲ ಮತ್ತು ಕೈಗೊಂಡ ಕ್ರಮದ ಬಗ್ಗೆ ಯಾವುದೇ ವರದಿಯನ್ನು ಸಲ್ಲಿಸಿರುವುದಿಲ್ಲ ಈ ಬಗ್ಗೆ ನೀವುಗಳು ಮೇಲಾಧಿಕಾರಿಗಳು ನೀಡಿದ ಆದೇಶಗಳನ್ನು ಪಾಲನೆ ಮಾಡದೆ ನಿರ್ಲಕ್ಷಿಸಿ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ ಎಂದು ಡಿ.ಎಸ್.ಪಿ. ಹಾಸನ, ಇವರು ಉಲ್ಲೇಖದಲ್ಲಿ ಕಾಣಿಸಲಾದ ಅವರ ವರದಿಯಲ್ಲಿ ತಿಳಿಸಿರುತ್ತಾರೆ. ಈ ಬಗ್ಗೆ ನೀವು ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಪ್ರದರ್ಶಿಸಿ ಲೋಪವೆಸಗಿರುವುದು ಕಂಡು ಬಂದಿರುತ್ತದೆ. ಆದ್ದರಿಂದ ನಿಮ್ಮ ಮೇಲೆ ಈ ದೋಷಾರೋಪಣಗಳನ್ನು ಕೆ.ಎಸ್.ಪಿ., (ಡಿ.ಪಿ) ನಿಯಮಾವಳಿಗಳು 1965ರ ನಿಯಮ 7 ರಡಿಯಲ್ಲಿ ಹೊರಡಿಸಿದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 22–12–08ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 4 ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11–03–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ. ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 85 ಪೊಸಿಅ 2010, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜೇಶ್, ಪಿ.ಎಸ್.ಐ., ಯಸಳೂರು ಪೊಲೀಸ್ ಠಾಣೆ ಸಕಲೇಶಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1372

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಯಂತ ನಾಗಪ್ಪ ಪಟಗಾರ ಮಾಜಿ ಪಿ.ಸಿ. ಕಾರವಾರ ಸಂಚಾರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಕಾರವಾರ, ಇವರ ಆದೇಶ ಸಂಖ್ಯೆ ಸಿಬ್ಬಂದಿ (2)/ಇವಿ/3/08 (ಓ.ಬಿ. 569/08) ದಿ: 04–12–08.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ (2)/ಮೇಲ್ಮನವಿ/01/2009 ದಿನಾಂಕ: 17–04–2009.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 24–07–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/29/2009–10, ದಿನಾಂಕ: 07–10–2009.

**ಪ್ರಸ್ತಾವನೆ :**

ಶ್ರೀ ಜಯಂತೆ ಪಟಗಾರ, ಇವರು ಕಾರವಾರ, ಸಂಚಾರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಸುಳ್ಳು ದಾಖಲೆ ನೀಡಿ ಸರ್ಕಾರಕ್ಕೆ ವಂಚಿಸಿ ಸರ್ಕಾರಿ ನೌಕರರಿಗೆ ತಕ್ಕದಲ್ಲದ ರೀತಿಯಲ್ಲಿ ನಡೆದುಕೊಂಡ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

" ಸಿ.ಪಿ.ಸಿ. 1289, ಶ್ರೀ ಜಯಂತ ನಾಗಪ್ಪ ಪಟಗಾರ, ಸಂಚಾರ ಪೊಲೀಸ್ ಠಾಣೆ, ಕಾರವಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು 1996ನೇ ಸಾಲಿನಲ್ಲಿ ಪೊಲೀಸ್ ಇಲಾಖೆಗೆ ಸೇರುವಾಗ ಸುಳ್ಳು ಜನ್ಮ ದಿನಾಂಕದ ದಾಖಲೆಗಳನ್ನು (ಮೂಲ ವರ್ಗಾವಣೆ ಪ್ರಮಾಣ ಪತ್ರ) ಹಾಜರು ಪಡಿಸಿ ಸರ್ಕಾರಿ ನೌಕರಿಯನ್ನು ಗಿಟ್ಟಿಸಿಕೊಂಡು ಸರ್ಕಾರಕ್ಕೆ ವಂಚಿಸಿರುವ ಆರೋಪ.

ನೀವು ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅಪರಾಧಿಗಳನ್ನು ತಡೆಯುವ ಹಾಗೂ ಅಪರಾಧಗಳನ್ನು ಹಿಡಿಯುವ ಕರ್ತವ್ಯ ನಿರ್ವಹಿಸುತ್ತಿರುವಿರಿ ಆದರೆ ಸುಳ್ಳು ದಾಖಲೆ ನೀಡಿ ಸರಕಾರಕ್ಕೆ ಮೋಸ ಮಾಡಿ ನೌಕರಿ ಪಡೆದು ಅಪರಾಧ ಎಸಗುವ ಮೂಲಕ ಸರಕಾರಿ ನೌಕರರಿಗೆ ತಕ್ಕದಲ್ಲದ ರೀತಿಯಲ್ಲಿ ನಡೆದುಕೊಂಡಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕಾರವಾರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 04-12-2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ್ದಾರೆ, ದಿನಾಂಕ 18-04-08 ರಿಂದ 07-08-2008ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 17-04-09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ. ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸುಳ್ಳು ದಾಖಲೆ ನೀಡಿ ಸರ್ಕಾರಕ್ಕೆ ಮೋಸ ಮಾಡಿ ನೌಕರಿ ಪಡೆದು ಅಪರಾಧ ಎಸುಗುವ ಮೂಲಕ ಸರ್ಕಾರಿ ನೌಕರರಿಗೆ ತಕ್ಕದಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 138 ಪೊಸಿಅ 2009, ಬೆಂಗಳೂರು, ದಿನಾಂಕ : 21-05-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಯಂತ ನಾಗಪ್ಪ ಪಟಗಾರ ಮಾಜಿ ಪಿ.ಸಿ. ಕಾರವಾರ ಸಂಚಾರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು-ಬಿ)

ಪಿ.ಆರ್. 1373

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಓ.ಬಿ. ಕಲ್ಲೇಶಪ್ಪ, ಪಿ.ಐ., ತುಮಕೂರು ಗ್ರಾಮಾಂತರ ವೃತ್ತ ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಫನ್ಸಿ/10/ಡಿಇ/09-10 (ಓ.ಬಿ. 74/2010-11) ದಿ: 17-07-2010.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ/(8)/43/2010-11 ದಿನಾಂಕ: 28-10-10.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 22-11-2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 43/2010-11, ದಿನಾಂಕ: 09-02-2011.

**ಪ್ರಸ್ತಾವನೆ :**

ಶ್ರೀ ಓ.ಬಿ. ಕಲ್ಲೇಶಪ್ಪ ಪಿ.ಐ. ಇವರು ತುಮಕೂರು ಜಿಲ್ಲೆಯ ಪಾವಗಡದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

" ಓ.ಬಿ. ಕಲ್ಲೇಶಪ್ಪ, ಸಿ.ಪಿ.ಐ. ಆದ ನೀವು ಈ ಹಿಂದೆ ತುಮಕೂರು ಜಿಲ್ಲೆಯ ಪಾವಗಡ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪೊಲೀಸ್ ಠಾಣೆಯ ಮೊ.ಸಂ. 21/2005 ಕಲಂ 302 427 ರೆ/ವಿ 34ಐ.ಪಿ.ಸಿ. ಪ್ರಕರಣದಲ್ಲಿ ನೀವು ತನಿಖೆಯನ್ನು ಕೈಗೊಂಡಿದ್ದು, ಸದರಿ ಪ್ರಕರಣದ ತನಿಖಾಧಿಕಾಯಾದ ನೀವು ತನಿಖೆಯ್ನು ಸಮರ್ಪಕವಾಗಿ ನಿರ್ವಹಿಸದೆ ಈ ಕೆಳಕಂಡ ಲೋಪದೋಷಗಳನ್ನು ಎಸಗಿದ್ದು, ಸದರಿ ಪ್ರಕರಣದಲ್ಲಿ ಅಮಾನುಲ್ಲಾನ ಕೊಲೆ ಏಕಾಯಿತು? ಯಾರು ಮಾಡಿದರು? ಎಂಬ ಬಗ್ಗೆ ಮಾಹಿತಿಗಳನನು ಸಂಗ್ರಹಿಸದೆ ಹಾಗೂ ಆರೋಪಿಗಳ ಪತ್ತೆಯ ಬಗ್ಗೆ

ಯಾವುದೇ ಪ್ರಾಮಾಣಿಕ ಪ್ರಯತ್ನ ಕೈಗೊಳ್ಳದೆ ಮತ್ತು ತನಿಖೆಯ ಬಗ್ಗೆ ಮೇಲಾಧಿಕಾರಿಗಳು ನೀಡಿರುವ ನಿರ್ಲಕ್ಷತೆಯನ್ನು ಗ್ರಾಮಾಂತರ ವೃತ್ತದ ಮೇಲ್ಕಂಡ ಕೇಸಿನ ಕಡತದ ಪರಿಶೀಲನೆಯಿಂದ ಈ ಕೇಸಿನ ತನಿಖೆಯನ್ನು ಮಾಡುತ್ತಿದ್ದ ಪಾವಗಡ ವೃತ್ತದ ಸಿ.ಪಿ.ಸಿ. ಶ್ರೀ ಓ.ಬಿ. ಕಲ್ಲೇಶಪ್ಪ ರವರು ಸರಿಯಾಗಿ ತನಿಖೆ ಮಾಡದೆ ಈ ಕೆಳಕಂಡ ಲೋಪದೋಷಗಳನ್ನು ಎಸಗಿರುವುದಾಗಿ ಆಪಾದನೆ.

1) ಈ ಕೇಸಿನ ಪಿರ್ಯಾದಿ ರಫೀಕ್ ಅಹಮದ್ ರವರು ದೂರಿನಲ್ಲಿ ಅನಿಲ್ ಎಂಬುವವರು ತಮ್ಮ ಮನೆಯ ಹತ್ತಿರ ಬಂದು ಅಮಾನುಲ್ಲಾ ರವರ ಸಾವಿನ ಬಗ್ಗೆ ರಾಮು ಎಂಬುವವರು ಎಸ್.ಟಿ.ಡಿ. ಬೂತ್‌ಗೆ ಪೋನ್ ಮಾಡಿ ತಿಳಿಸಿದರು ಎಂದು ನಮೂದಿಸಲಾಗಿದ್ದು, ಎಸ್.ಟಿ.ಡಿ. ಬೂತಿನ ಮಾಲೀಕ ಅನಿಲ್ ಎಂಬುವವರನ್ನು ವಿಚಾರಣೆ ಮಾಡಿರುತ್ತೀರಿ. ಆದರೆ ಅನಿಲ್ ಅವರಿಗೆ ರಾಮು ಎಂಬುವವರು ಫೋನ್ ಮಾಡಿದ್ದರೆ ಅಥವಾ ಇಲ್ಲವೆ? ಅನಿಲ್ ರವರಿಗೆ ಯಾರಿಂದ ಫೋನ್ ಕರೆ ಬಂತು ಎಂಬುದನ್ನು ತಿಳಿದುಕೊಳ್ಳದೆ ಪ್ರ.ವ. ವರೆವಿಗೆ ಅನುಸಾರವಾಗಿ ಹೇಳಿಕೆ ಮಾಡಿಕೊಂಡು ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
2) ಈ ಕೇಸಿನ ಆರೋಪಿ ಎನ್ನಲಾದ ರಾಮು ಎಂಬುವವರನ್ನು ದಿ: 01–11–07 ರಂದು ವಿಚಾರಣೆಗಾಗಿ ಕರೆ ತಂದಿದ್ದು, ಆತನು ತನ್ನ ವಿಚಾರಣಾ ಕಾಲದಲ್ಲಿ ನೀಡಿರುವ ಹೇಳಿಕೆಯಲ್ಲಿ ತಿಳಿಸಿರುವಂತಹ ಈ ಕೆಳಕಂಡಂತಹ ವ್ಯಕ್ತಿಗಳನ್ನೆ ಪತ್ತೆಮಾಡಿ ವಿಚಾರಣೆ ಮಾಡುವ ಯಾವ ಪ್ರಯತ್ನವನ್ನು ಸಹ ನೀವು ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
3) ದಿನಾಂಕ : 17–02–2005ರ ರಾತ್ರಿ ಮೃತ ಅಮಾನುಲ್ಲಾ ಎಂಬುವವನೊಂದಿಗೆ ಇದ್ದ ಎನ್ನಲಾದ ಬಾಬಯ್ಯ ಎಂಬುವವರನ್ನು ವಿಚಾರಣೆ ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
4) ಅಮಾನುಲ್ಲಾ ದಿ: 17–02–05 ರಂದು ಭೇಟಿ ಮಾಡಿದ ಎಂದು ಹೇಳಲಾದ ಕಂಬದೂರಿನ ಜೀಪ್ ಡ್ರೈವರ್ ಗುಂಡುಸಾಭ ರವರ ವಿಚಾರಣೆ ಮಾಡದೆ ಉದಾಸೀನತೆ ತೋರಿರುವುದು ಕಂಡು ಬಂದಿರುತ್ತೆ.
5) ದಿ: 17–02–05 ರಂದು ಆದಿಯಿಂದ ಫೋನ್ ಕರೆ ಬಂದಿತ್ತೆಂದು ಅಮಾನುಲ್ಲಾ ರವರಿಗೆ ತಿಳಿಸಿದೆ ಎನ್ನಲಾದ ನಂದ ಎಂಬುವವರನ್ನು ವಿಚಾರಣೆ ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
6) ಅಮಾನುಲ್ಲಾನಿಗೆ 10,000/– ರೂ ಹಣನೀಡಿದ ಎನ್ನಲಾದ ಗುಜರಿ ಅಂಗಡಿಯ ಮಾಲೀಕ ಯಾರೆಂದು ಹಾಗೂ ಆತನಿಂದ ಏತಕ್ಕೆ ಹಣ ತೆಗೆದುಕೊಂಡಿದ್ದರು ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
7) ಅಮಾನುಲ್ಲಾನು ಬಳ್ಳಾರಿಯಲ್ಲಿ ನಡೆದ ಗಲಾಟೆ ಬಗ್ಗೆ ಸೆಟಲ್‌ಮೆಂಟ್ ಮಾಡಿಕೊಂಡು ಬರೋಣ ಎಂದು ತಿಳಿಸಿದ್ದ ಎಂದು ಹೇಳಿಕೆಯಲ್ಲಿದ್ದು, ಆ ಗಲಾಟೆ ಏನು? ಗಲಾಟೆ ಯಾರಿಗೆ ಆಗಿತ್ತು ? ಆ ಗಲಾಟೆ ಯಾವ ವಿಷಯದ ಬಗ್ಗೆ ಆಗಿತ್ತು? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
8) ವೆಂಕಟಾಪುರದಲ್ಲಿ ಅಮಾನುಲ್ಲಾನ ಅಣ್ಣನನ್ನು ಭೇಟಿ ಮಾಡಿದ್ದಾನೆಂತ ಹೇಳಿಕೆಯಲ್ಲಿದ್ದು ಆ ವ್ಯಕ್ತಿ ಯಾರೆಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
9) ಹಿಂದೂಪುರದಲ್ಲಿ ಅಮಾನುಲ್ಲಾ ರವರ ಅಣ್ಣನ ಸ್ನೇಹಿತನ ಮೊಬೈಲಿಗೆ ಫೋನ್ ಮಾಡಿ ಭೇಟಿಮಾಡಿ ಇಬ್ಬರೂ ಏನೋ ಉರ್ದು ಭಾಷೆಯಲ್ಲಿ ಮಾತನಾಡುತ್ತಿದ್ದರು ಎಂಬ ವಿಷಯ ರಾಮು ಹೇಳಿಕೆಯಲ್ಲಿ ಇದ್ದು, ಆ ಅಣ್ಣನ ಸ್ವೇಹಿತ ಯಾರು? ಉರ್ದು ಭಾಷೆಯಲ್ಲಿ ಏನು ಮಾತನಾಡುತ್ತಿದ್ದರು? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
10) ಅಮಾನುಲ್ಲಾ ರವರ ಅತ್ತಿಗೆ ಯಾರು ಎಂಬುದನ್ನು ತಿಳಿದುಕೊಂಡಿರುವುದಿಲ್ಲ. ಅಮಾನುಲ್ಲಾ ರಾಮುವಿಗೆ ಅವರ ಸ್ನೇಹಿತ ಫೋನ್ ನಂಬರ್ ಕೊಟ್ಟು ಫೋನ್ ಮಾಡಲು ಹೇಳಿದ್ದರು ಎಂದು ರಾಮು ಹೇಳಿಕೆಯಲ್ಲಿ ಇದ್ದು, ಆ ಫೋನ್ ನಂಬರ್ ಯಾವುದು: ಆ ಸ್ನೇಹಿತ ಯಾರು? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
11) ಟೈರ್ ರೀ ಬೆಲ್ಟ್ ಅಂಗಡಿಯ ಮಾಲೀಕರು ಯಾರು? ಆತನ ಹತ್ತಿರ ಅಮಾನುಲ್ಲಾ ಏನು ಮಾತನಾಡುತ್ತಿದ್ದನು? ಅಮಾನುಲ್ಲಾ ಹತ್ತಿರ 10,000/– ರೂ ಗಳಿದ್ದರೂ ಸಹ 1,000/– ರೂಗಳನ್ನು ಏಕೆ ಕೇಳಿದ? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
12) ಅಮಾನುಲ್ಲಾ ರವರ ತಂಗಿಯ ಮನೆಯ ಹತ್ತಿರ ಇದ್ದ ಸ್ನೇಹಿತರಾದ ಜಿಯಾ ಮತ್ತು ಇತರೆ 3 ಜನರು ಬೈಕಿನಲ್ಲಿ ಎಲ್ಲಿಗೆ ಹೋಗಿದ್ದರು? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
13) ಜಿಯಾ ಎಂಬುವವರು ಅಮಾನುಲ್ಲಾನಿಗೆ ಯಾರಿಂದ ಎಲ್ಲಿಗೆ ಹೋಗಿ ಹಣ ತಂದು ಕೊಟ್ಟ? ಜೀಯಾನೊಂದಿಗೆ ಮದ್ಯಪಾನ ಮಾಡಲು ಬಂದಿದ್ದರು ಎನ್ನಲಾದ 5 ಜನ ಸ್ನೇಹಿತರು ಯಾರು ಎಂಬುದನ್ನು ತಿಳಿದುಕೊಳ್ಳಲು ಯಾವ ಪ್ರಯತ್ನ ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
14) ಅಮಾನುಲ್ಲಾ 5 ಹೂವಿನ ಹಾರಗಳನ್ನು ಏತಕ್ಕೆ ತೆಗೆದುಕೊಂಡಿದ್ದರು? ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
15) ಶ್ರೀನಿವಾಸಪುರದಲ್ಲಿ ಅಮಾನುಲ್ಲಾ, ಆದಿ @ ಆದಿಶೇಷನನ್ನು ಮಾತನಾಡಿಸುತ್ತಿದ್ದಾಗ ಆದಿಯ ಜೊತೆಯಲ್ಲಿದ್ದ ಸ್ನೇಹಿತ ಯಾರು ಎಂಬುದನ್ನು ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
16) ಅಮಾನುಲ್ಲಾನು ಖರೀದಿಸಿದ್ದ ಹೂವಿನ ಹಾರಗಳನ್ನು ಆದಿ ತರುತ್ತೇನೆಂತ ತೆಗೆದುಕೊಂಡಿದ್ದ ಅಮಾನುಲ್ಲಾ ಅವುಗಳನ್ನು ತೆಗೆದುಕೊಂಡು ಬರುತ್ತಾನೆಂದು ಹೇಳಿ ಹೋದಾಗ ರಾಮು ಬಹಳ ಸಮಯ ಅಮಾನುಲ್ಲಾನಿಗಾಗಿ ಕೃಷ್ಣಾಪುರದ ಬಳಿ ಕಾದು, ಎಷ್ಟು ಹೊತ್ತಾದರೂ ಬಾರದೆ ಇದ್ದುದರಿಂದ ರಾತ್ರಿ 12.00 ಗಂಟೆಗೆ ಊರಿಗೆ ಬಂದನೆಂತ ಹೇಳಿಕೆಯಲ್ಲಿ ತಿಳಿಸಿದ್ದು, ರಾಮು ಆ ದಿನ ಕಂಬದೂರಿಗೆ ಬಂದನೆ? ಆ ದಿನ ರಾತ್ರಿ ಆತನು ಎಲ್ಲಿದ್ದ? ಎಂಬುದನ್ನು ತಿಳಿದುಕೊಳ್ಳಲು ಯಾವುದೇ ಪ್ರಯತ್ನ ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.
17) ರಾಮು ತನ್ನ ಹೇಳಿಕೆಯಲ್ಲಿ ಅನೀಲನಿಗೆ ಫೋನ್ ಮಾಡಿ ಅಮಾನುಲ್ಲಾನ ಕೊಲೆಯಾಗಿರುವ ವಿಷಯವನ್ನು ತಿಳಿಸಿರುವುದಿಲ್ಲ ಎಂತ ಹೇಳಿದ್ದು ಅನಿಲ್‌ಗೆ ಫೋನ್ ಮಾಡಿದ್ದವರು ಯಾರು? ರಾಮು ಫೋನ್ ಮಾಡಿದ್ದನೆ? ಎಂಬುದರ ಬಗ್ಗೆ ಎಸ್.ಟಿ.ಡಿ. ಬೂತ್

ಮಾಲೀಕರಿಂದಾಗಲಿ, ಫಿರ್ಯಾದಿ ರಫೀಕ್‌ಅಹಮದ್ ರವರಿಂದಾಗಲಿ ತಿಳಿದುಕೊಳ್ಳದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.

18) ಅಮಾನುಲ್ಲಾನಲ್ಲಿದ್ದ 10,000/– ರೂ ಆತನ ಸಾವಿನ ಮೊದಲಾಗಲಿ, ನಂತರವಾಗಲಿ ಏನಾಯಿತು ಎಂಬ ಬಗ್ಗೆ ಎಲ್ಲಿಯೂ ಪ್ರಸ್ತಾವನೆ ಮಾಡದೆ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.

19) ದಿನಾಂಕ 20–09–06 ರಂದು "ಸಿ" ಅಂತಿಮ ವರದಿ ಸಲ್ಲಿಸಲು ಅನುಮತಿ ಕೇಳಿರುವ ಪ್ರಪತ್ರ ಸಂಖ್ಯೆ 753ರಲ್ಲಿ ಆರೋಪಿ ಆದಿ @ ಆದಿಶೇಷನ ಪತ್ತೆ ಬಗ್ಗೆ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾಗ್ಯೂ ಪತ್ತೆಯಾಗಲಿಲ್ಲವೆಂತಲೂ ಪುನಃ ದಿನಾಂಕ : 23–8–07 ರಂದು ಎರಡನೇ ಭಾರಿಗೆ "ಸಿ" ಅಂತಿಮ ವರದಿ ಸಲ್ಲಿಸಲು ಅನುಮತಿಯನ್ನು ಕೋರಿ ಸಲ್ಲಿಸಿಕೊಂಡಿರುವ ವರದಿಯಲ್ಲಿ ಆದಿ @ ಆದಿಶೇಷನನ್ನು ಕರೆತಂದು ವಿಚಾರಣೆ ಮಾಡಿರುವ ಬಗ್ಗೆ ಪ್ರಸ್ತಾಪ ಇರುವುದಿಲ್ಲವಾದರೂ ಆದಿಯನ್ನು ವಿಚಾರಣೆ ಮಾಡಿರುತ್ತೆ ಎಂದು ಸುಳ್ಳು ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ನಿವೇದಿಸಿಕೊಂಡು ನಿಮ್ಮ ಕರ್ತವ್ಯದಲ್ಲಿ ಉದಾಸೀನತೆಯನ್ನು ತೋರಿರುವುದು ಕಂಡು ಬಂದಿರುತ್ತೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 17–7–2010ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗುವಂತೆ ತಡೆಹಿಡಿಯಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–10–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 186 ಪೊಸಿಅ 2010, ಬೆಂಗಳೂರು, ದಿನಾಂಕ : 20–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಓ.ಬಿ. ಕಲ್ಲೇಶಪ್ಪ, ಪಿ.ಐ., ತುಮಕೂರು ಗ್ರಾಮಾಂತರ ವೃತ್ತ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1374 ಒಳಾಡಳಿತ ಇಲಾಖೆ (ಸಮನ್ವಯ)

## ಒಳಾಡಳಿತ ಸಚಿವಾಲಯ

**ವಿಷಯ :** ಒಳಾಡಳಿತ ಇಲಾಖೆಗೆ ಹೊಸದಾಗಿ ಮಂಜೂರು ಮಾಡಿರುವ ಉಪ ಕಾರ್ಯದರ್ಶಿ ಹಾಗೂ ಅಧೀನ ಕಾರ್ಯದರ್ಶಿಗಳು ನಿರ್ವಹಿಸಬೇಕಾದ ವಿಷಯ/ಕಾರ್ಯ ಭಾರ ಹಂಚಿಕೆಯ ಕುರಿತು.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂಖ್ಯೆ : ಒಸಾಇ 36 ಸಶಾಶಾ 2001, ದಿನಾಂಕ: 21–05–2003.
2) ಸರ್ಕಾರದ ಆದೇಶ ಸಂಖ್ಯೆ : ಒಇ 44 ಸಶಾಶಾ 2004, ದಿನಾಂಕ: 28–01–2008.
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 458 ಸಆಸೇ 2008, ದಿನಾಂಕ: 22–03–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ : 21–05–2003ರಲ್ಲಿ ಒಳಾಡಳಿತ ಇಲಾಖೆಯ ಜಂಟಿ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿಯವರಿಗೆ ನಿರ್ವಹಿಸಬೇಕಾದ ವಿಷಯ ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ: 28–01–2008ರಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 36 ಸಶಾಶಾ 2001, ದಿನಾಂಕ: 21–05–2003 ಅನ್ನು ಭಾಗಶ: ಮಾರ್ಪಡಿಸಿ ಒಳಾಡಳಿತ ಇಲಾಖೆಯ ಜಂಟಿ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿಯವರಿಗೆ ಕಾರ್ಯ ವಿಷಯಗಳ ಬಗ್ಗೆ ಮರು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (3)ರ ಸರ್ಕಾರದ ಆದೇಶ ದಿನಾಂಕ : 22–03–2011 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಗ್ರೂಪ್–ಎ ಹುದ್ದೆಗಳ ಸೃಜನೆ ಹಾಗೂ ಉನ್ನತೀಕರಿಸಿ ಒಳಾಡಳಿತ ಇಲಾಖೆಗೆ ಒಂದು ಉಪ ಕಾರ್ಯದರ್ಶಿ ಹಾಗೂ ಒಂದು ಅಧೀನ ಕಾರ್ಯದರ್ಶಿ ಹುದ್ದೆಗಳನ್ನು ಅಧಿಕವಾಗಿ ಸೃಜಿಸಲಾಗಿದೆ.

ಈ ಸಂಬಂಧವಾಗಿ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿಯವರಿಗೆ ವಿಷಯ ಹಂಚಿಕೆ ಮಾಡಲು ಸರ್ಕಾರ ನಿರ್ಧರಿಸಿದೆ, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಒಇ 12 ಪಿಸಿಎನ್ 2011, ಬೆಂಗಳೂರು, ದಿನಾಂಕ : 21–05–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಲ್ಲೇಖ (2)ರಲ್ಲಿ ಸೂಚಿಸಿರುವ ಸರ್ಕಾರದ ಆದೇಶ ಸಂಖ್ಯೆ : ಒಇ 44 ಸಶಾಶಾ 2004, ದಿನಾಂಕ : 28–01–2008 ಅನ್ನು ಭಾಗಶಃ ಮಾರ್ಪಡಿಸಿ, ಒಳಾಡಳಿತ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ಸರ್ಕಾರದ ಉಪ

ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿ (ಪೊಲೀಸ್ ಸೇವೆಗಳು–ಬಿ) ಎಂದು ಪದನಾಮೀಕರಿಸಿ ಸದರಿ ಅಧಿಕಾರಿಗಳಿಗೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವಂತೆ ಮಾರ್ಪಡಿಸಿದ ಕಾರ್ಯ ವಿಷಯಗಳ ಮರು ಹಂಚಿಕೆಯನ್ನು ಮಾಡಿ ಆದೇಶಿಸಿದೆ.

| | |
|---|---|
| 1) ಸರ್ಕಾರದ ಉಪ ಕಾರ್ಯದರ್ಶಿ:–<br>(ಪೊಲೀಸ್ ಸಹಾಯಕ ಸೇವೆಗಳು) | 1) ಪೊಲೀಸ್ ಸಹಾಯಕ ಸೇವೆಗಳು<br>2) ಸೆರಮನೆ ಮತ್ತು ಸಿನಿಮಾ |
| 2) ಸರ್ಕಾರದ ಅಧೀನ ಕಾರ್ಯದರ್ಶಿ:–<br>(ಪೊಲೀಸ್ ಸೇವೆಗಳು–ಬಿ) | 1) ಪೊಲೀಸ್ ಸೇವೆಗಳು–ಬಿ ಶಾಖೆಯ ಎಲ್ಲಾ ವಿಷಯಗಳು. (ಪರಿಷ್ಕರಣ ಮೇಲ್ಮನವಿ ಮತ್ತು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಹೊರತುಪಡಿಸಿ)<br>2)ಡಿ.ವೈ.ಎಸ್.ಪಿ. ಹಾಗೂ ಎಸ್.ಪಿ. (ನಾನ್ ಐ.ಪಿ.ಎಸ್.) ಗಳ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ<br>3) ಕಾಫಿ ಪೋಸ ಮತ್ತು ಪ್ರಾಷಿಕ್ಯೂಷನ್ ಇಲಾಖೆ ಸಂಬಂಧಿಸಿದ ವಿಷಯಗಳು. |

3) ಮುಂದುವರಿದು ಪ್ರಸಕ್ತ ಇರುವ ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು) ಹುದ್ದೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ (ಪೊಲೀಸ್ ಸೇವೆಗಳು–ಎ) ಎಂದು ಪದನಾಮೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸಮನ್ವಯ)

ಪಿ.ಆರ್. 1375

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

ವಿಷಯ: 6ನೇ ಆರ್ಥಿಕ ಗಣತಿ 2012ರ ಕಾರ್ಯಾಚರಣೆಯ ಸಂಯೋಜನೆಗೆ ರಾಜ್ಯ ಮಟ್ಟದಲ್ಲಿ ಚಾಲನಾ ಸಮಿತಿಯನ್ನು ಸ್ಥಜಿಸುವುದರ ಕುರಿತು.

ಓದಲಾಗಿದೆ: ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಆಸಾಂನಿ/23/ಖಕ್ಷೆಶ/31/ಆ.ಗ/2010–11 ದಿನಾಂಕ: 04.05.2011.

**ಪ್ರಸ್ತಾವನೆ:–**

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರು ಮೇಲೆ ಓದಲಾದ ಪತ್ರದಲ್ಲಿ ಭಾರತ ಸರ್ಕಾರವು 1977ರಿಂದ ಆರ್ಥಿಕ ಗಣತಿಯನ್ನು ನಿಯಮಿತವಾಗಿ ಕೈಗೊಳ್ಳುತ್ತಿರುವುದಾಗಿ ತಿಳಿಸಿರುತ್ತಾರೆ. ಈಗಾಗಲೇ ಭಾರತ ಸರ್ಕಾರವು 5 ಆರ್ಥಿಕ ಗಣತಿಗಳನ್ನು ಕೈಗೊಂಡಿದೆ. 2012ರಲ್ಲಿ 6ನೇ ಆರ್ಥಿಕ ಗಣತಿಯನ್ನು ಕೈಗೊಳ್ಳಲು ಭಾರತ ಸರ್ಕಾರವು ತೀರ್ಮಾನಿಸಿದ್ದು, ಇದಕ್ಕೆ ಸಂಬಂಧಿಸಿದಂತೆ ರಾಜ್ಯದಾದ್ಯಂತ ಕ್ಷೇತ್ರ ಕಾರ್ಯಾಚರಣೆಯನ್ನು 16.04.2012 ರಿಂದ 15.05.2012ರ ವರೆಗೆ ಕೈಗೊಳ್ಳಲು ತೀರ್ಮಾನಿಸಲಾಗಿದೆ. ಇದರ ಮುಖ್ಯ ಉದ್ದೇಶ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಸಾರ್ವಜನಿಕ ಹಾಗೂ ಖಾಸಗಿ ವಲಯದಲ್ಲಿರುವ ಸಂಘಟಿತ ಹಾಗೂ ಅಸಂಘಟಿತ ವಿಭಾಗಗಳ ವಿವಿಧ ಆರ್ಥಿಕ ಚಟುವಟಿಕೆಗಳನ್ನು ಹೊಂದಿರುವ ಉದ್ಯಮಗಳ ಪಟ್ಟಿಯನ್ನು ತಯಾರಿಸುವುದಾಗಿದೆ ಎಂದು ಸದರಿ ಪತ್ರದಲ್ಲಿ ತಿಳಿಸಿರುತ್ತಾರೆ.

ಗಣತಿಯ ಕಾರ್ಯಾಚರಣೆಯು ರಾಜ್ಯದಲ್ಲಿ ಸುಗಮವಾಗಿ ಮತ್ತು ಸುಸೂತ್ರವಾಗಿ ನಡೆಸುವ ಸಲುವಾಗಿ ರಾಜ್ಯಮಟ್ಟದ ಸರ್ಕಾರದ ಮುಖ್ಯ ಕಾರ್ಯದರ್ಶಿಗಳನ್ನು ಪದ ನಿಮಿತ್ತ ಮುಖ್ಯ ಆರ್ಥಿಕ ಗಣತಿ ಆಯುಕ್ತರು ಎಂಬ ಪದನಾಮದೊಂದಿಗೆ, ಇವರ ಅಧ್ಯಕ್ಷತೆಯಲ್ಲಿ ಚಾಲನಾ ಸಮಿತಿಯನ್ನು ರಚಿಸಬೇಕಾಗಿದ್ದು, ಇದರಲ್ಲಿ ಸಂಬಂಧಿಸಿದ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳನ್ನು ಸದಸ್ಯರುಗಳನ್ನಾಗಿ ಹಾಗೂ ನಿರ್ದೇಶಕರು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನಾಮ ನಿರ್ದೇಶನಗೊಳಿಸಬೇಕೆಂದು ಸದರಿ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ,

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆಯೇ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 83 ಎಸ್ಎಂಸಿ 2011, ಬೆಂಗಳೂರು, ದಿನಾಂಕ:21.07.2011**

ಮೇಲ್ಕಂಡ ಅಂಶಗಳನ್ನು ಗಮನದಲ್ಲಿಟ್ಟುಕೊಂಡು 6ನೇ ಆರ್ಥಿಕ ಗಣತಿ 2012ರ ಸುಗಮ ಕಾರ್ಯಾಚರಣೆಗಾಗಿ ರಾಜ್ಯ ಮಟ್ಟದಲ್ಲಿ ಈ ಕೆಳಕಂಡ ಉನ್ನತಾಧಿಕಾರಿಗಳನ್ನೊಳಗೊಂಡ ಚಾಲನಾ ಸಮಿತಿಯನ್ನು ರಚಿಸಿ ಆದೇಶಿಸಿಲು ಸರ್ಕಾರವು ಹರ್ಷಿಸುತ್ತದೆ.

| | | | |
|---|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಹಾಗೂ ಪದನಿಮಿತ್ತ ಮುಖ್ಯ ಆರ್ಥಿಕ ಗಣತಿ ಆಯುಕ್ತರು. ಕರ್ನಾಟಕ ಸರ್ಕಾರ. | – | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ. | – | ಸದಸ್ಯರು |

| | | | |
|---|---|---|---|
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ. | – | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು.<br>ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. | – | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು.<br>ಕಂದಾಯ ಇಲಾಖೆ. | – | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು.<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ. | – | ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿ.<br>ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಇಲಾಖೆ. | – | ಸದಸ್ಯರು |
| 8. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇಲಾಖೆ. | – | ಸದಸ್ಯರು |
| 9. | ಸರ್ಕಾರದ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ (ಬಜೆಟ್ ಸಂಪನ್ಮೂಲ). | – | ಸದಸ್ಯರು |
| 10. | ಅಪರ ಮಹಾ ನಿರ್ದೇಶಕರು/ ಉಪ ಮಹಾ ನಿರ್ದೇಶಕರು, ಆರ್ಥಿಕ ಸಾಂಖ್ಯಿಕ ವಿಭಾಗ,<br>ಕೇಂದ್ರ ಸಾಂಖ್ಯಿಕ ಕಛೇರಿ, ಭಾರತ ಸರ್ಕಾರ. | – | ಸದಸ್ಯರು |
| 11. | ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ. | – | ಸದಸ್ಯರು |
| 12. | ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ. | – | ಸದಸ್ಯರು |
| 13. | ಆಯುಕ್ತರು, ಕಾರ್ಮಿಕ ಇಲಾಖೆ. | – | ಸದಸ್ಯರು |
| 14. | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ,<br>ಬೆಂಗಳೂರು. | – | ಸದಸ್ಯರು |
| 15. | ನಿರ್ದೇಶಕರು, ಜನಗಣತಿ, ಭಾರತ ಸರ್ಕಾರ,<br>ಕರ್ನಾಟಕ. | – | ಸದಸ್ಯರು |
| 16. | ಉಪ ಮಹಾ ನಿರ್ದೇಶಕರು,<br>ರಾಷ್ಟ್ರೀಯ ಮಾದರಿ ಸಮೀಕ್ಷೆ ಸಂಸ್ಥೆ,<br>(ಕ್ಷೇತ್ರ ಕಾರ್ಯಚರಣೆ ವಿಭಾಗ). | – | ಸದಸ್ಯರು |
| 17. | ನಿರ್ದೇಶಕರು,<br>ಕಾರ್ಖಾನೆ ಮತ್ತು ಬಾಯ್ಲರ್‌ಗಳ ಕಛೇರಿ. | – | ಸದಸ್ಯರು |
| 18. | ಅಧ್ಯಕ್ಷರು/ಕಾರ್ಯದರ್ಶಿಗಳು,<br>ಎಫ್.ಕೆ.ಸಿ.ಸಿ.ಐ/ಕೆ.ಎ.ಎಸ್.ಎಸ್.ಐ.ಎ/ಇತರೇ ಸಂಘಗಳು | – | ಸದಸ್ಯರು |
| 19. | ನಿರ್ದೇಶಕರು,<br>ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, | – | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಕಾರ್ಯಚರಣೆ ಈ ಕೆಳಕಂಡಂತಿದೆ:**

1. ಸಮಿತಿಯು 6ನೇ ಆರ್ಥಿಕ ಗಣತಿ ಕಾರ್ಯಕ್ಕಾಗಿ ಕನಿಷ್ಠ ಮೂರು ತಿಂಗಳಿಗೊಮ್ಮೆ ಹಾಗೂ ಅವಶ್ಯವಿರುವ ಸಂದರ್ಭದಲ್ಲಿ ಸಭೆ ನಡೆಸುವುದು.
2. ಸಮಿತಿಯು 6ನೇ ಆರ್ಥಿಕ ಗಣತಿಗೆ ಸಂಬಂಧಿಸಿದ ಚಟುವಟಿಕೆಗಳ ಸಮನ್ವಯ ಹಾಗೂ ಉಸ್ತುವಾರಿಯನ್ನು ಕೈಗೊಳ್ಳುವುದು.
3. 6ನೇ ಆರ್ಥಿಕ ಗಣತಿಯನ್ನು ಸುಸೂತ್ರವಾಗಿ ಕೈಗೊಳ್ಳುವುದಕ್ಕೆ ಭಾರತ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಅನುಷ್ಠಾನ ಸಚಿವಾಲಯ, ನವದೆಹಲಿ ಹೊರಡಿಸಿರುವ ಸೂಚನೆಗಳನ್ನು ಕಾರ್ಯರೂಪಕ್ಕೆ ತರುವ ಕುರಿತು ಕ್ರಮ ಕೈಗೊಳ್ಳುವುದು.
4. ಗಣತಿಯ ಎಲ್ಲಾ ಚಟುವಟಿಕೆಗಳು ಸೂಸೂತ್ರವಾಗಿ ಹಾಗೂ ಸುಗುಮವಾಗಿ ನಡೆಸಲು ಸಂಬಂಧಿಸಿದ ಅಧಿಕಾರಿಗಳಿಗೆ/ಭಾಗೀದಾರರಿಗೆ ಮಾರ್ಗದರ್ಶನ/ಸೂಚನೆಗಳನ್ನು ನೀಡುವುದು.
5. ಸಮಿತಿಯು ವಿವಿಧ ಕ್ಷೇತ್ರಗಳಲ್ಲಿನ ತಜ್ಞರನ್ನು ಸದಸ್ಯರನ್ನಾಗಿ ನೇಮಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ.ವಿ.ರಾಮ)

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್–5).

